KA / BG-GPO/2515/WPP-47/2006-2008



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೧ | ಬೆಂಗಳೂರು, ಗುರುವಾರ, ಜೂನ್ ೨೯, ೨೦೦೬ (ಆಷಾಡ ೮, ಶಕ ವರ್ಷ ೧೯೨೮) | ಸಂಚಿಕೆ ೨೬ |
|---|---|---|

## ಭಾಗ – ೪

## ರಾಜ್ಯದ ವಿಧೇಯಕಗಳ ಮತ್ತು ಅವುಗಳ ಮೇಲೆ ಪರಿಶೀಲನಾ ಸಮಿತಿಯ ವರದಿಗಳು, ರಾಜ್ಯದ ಅಧಿನಿಯಮಗಳು ಮತ್ತು ಅಧ್ಯಾದೇಶಗಳು, ಕೇಂದ್ರದ ಮತ್ತು ರಾಜ್ಯದ ಶಾಸನಗಳ ಮೇರೆಗೆ ರಾಜ್ಯ ಸರ್ಕಾರವು ಹೊರಡಿಸಿದ ಸಾಮಾನ್ಯ ಶಾಸನಬದ್ಧ ನಿಯಮಗಳು ಮತ್ತು ರಾಜ್ಯಾಂಗದ ಮೇರೆಗೆ ರಾಜ್ಯಪಾಲರು ಮಾಡಿದ ನಿಯಮಗಳು, ಹಾಗೂ ಕರ್ನಾಟಕ ಉಚ್ಚ ನ್ಯಾಯಾಲಯವು ಮಾಡಿದ ನಿಯಮಗಳು.

## ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ : ಸಂವ್ಯಶಾಇ 5 ಕೇಶಾಪ್ರ 2006, ಬೆಂಗಳೂರು, ದಿನಾಂಕ: 21ನೇ ಮಾರ್ಚ್ 2006**

ದಿನಾಂಕ 13.12.2005 ರಂದು ಲೋಕ ಸಭೆಯಲ್ಲಿ ಮಂಡಿಸಲಾಗಿರುವ The Scheduled Tribes (Recognition of Forest Rights) Bill, 2005 ಅನ್ನು ಆಂಗ್ಲ ಹಾಗೂ ಕನ್ನಡ ಭಾಷೆಯಲ್ಲಿ ಸಾರ್ವಜನಿಕರ ಮಾಹಿತಿಗಾಗಿ ಕರ್ನಾಟಕ ರಾಜ್ಯ ಪತ್ರದಲ್ಲಿ ಮರು ಪ್ರಕಟಿಸಲಾಗಿದೆ.

**ಅನುಸೂಚಿತ ಬುಡಕಟ್ಟುಗಳ (ಅರಣ್ಯ ಹಕ್ಕುಗಳನ್ನು ಮಾನ್ಯ ಮಾಡುವ) ವಿಧೇಯಕ, 2005**

ತಲೆಮಾರುಗಳಿಂದ ಅರಣ್ಯಗಳಲ್ಲಿ ವಾಸಿಸುತ್ತಿರುವ ಆದರೆ ಅವರ ಹಕ್ಕುಗಳನ್ನು ದಾಖಲಿಸಲಾಗದ ಅರಣ್ಯವಾಸಿ ಅನುಸೂಚಿತ ಬುಡಕಟ್ಟುಗಳ ಅರಣ್ಯ ಜಮೀನಿನಲ್ಲಿನ ಅರಣ್ಯ ಹಕ್ಕುಗಳನ್ನು ಮತ್ತು ಅಧೀಭೋಗವನ್ನು ಮಾನ್ಯ ಮಾಡಲು ಮತ್ತು ನಿಹಿತಗೊಳಿಸಲು ಹಾಗೂ ಹಾಗೆ ನಿಹಿತಗೊಳಿಸಲಾದ ಅರಣ್ಯ ಹಕ್ಕುಗಳನ್ನು ಮತ್ತು ಅರಣ್ಯ ಜಮೀನಿಗೆ ಸಂಬಂಧಿಸಿದ ಅಂಥ ಮಾನ್ಯತೆ ಹಾಗೂ ನಿಹಿತಗೊಳಿಸುವಿಕೆಗೆ ಅಗತ್ಯವಾದ ಸಾಕ್ಷ್ಯದ ಸ್ವರೂಪವನ್ನು ದಾಖಲಿಸುವುದಕ್ಕಾಗಿ ಒಂದು ಚೌಕಟ್ಟಿಗೆ ಅವಕಾಶ ಕಲ್ಪಿಸುವ ಒಂದು ವಿಧೇಯಕ.

ಅರಣ್ಯವಾಸಿ ಅನುಸೂಚಿತ ಬುಡಕಟ್ಟುಗಳ ಮಾನ್ಯ ಮಾಡಿದ ಹಕ್ಕುಗಳು, ಸಮರ್ಥನೀಯ ಬಳಕೆ, ಜೀವ ವೈವಿಧ್ಯದ ಸಂರಕ್ಷಣೆ ಮತ್ತು ಪರಿಸರ ಸಮತೋಲನ ನಿರ್ವಹಣೆಯ ಹೊಣೆಗಾರಿಕೆಗಳನ್ನು ಮತ್ತು ಅಧಿಕಾರವನ್ನು ಒಳಗೊಂಡು, ಅದರ ಮೂಲಕ ಅರಣ್ಯವಾಸಿ ಅನುಸೂಚಿತ ಬುಡಕಟ್ಟುಗಳ ಜೀವನೋಪಾಯ ಮತ್ತ ಆಹಾರ ಭದ್ರತೆಯನ್ನು ಸುನಿಶ್ಚಿತಗೊಳಿಸುವಾಗ ಅರಣ್ಯಗಳ ಸಂರಕ್ಷಣ ಪದ್ಧತಿಯನ್ನು ಬಲಪಡಿಸುವುದು ಒಳಗೊಳ್ಳುವುದರಿಂದ;

ಮತ್ತು ಅರಣ್ಯ ಪರಿಸರ ವ್ಯವಸ್ಥೆಯನ್ನು ತದ್ವತ್ತಾಗಿ ಉಳಿಸಿಕೊಂಡು ಬರಲು ಮತ್ತು ಅದರ ನಿರ್ವಹಣೆಗೆ ಅವಿಭಾಜ್ಯ ಅಂಗವಾಗಿರುವ ಅರಣ್ಯವಾಸಿ ಅನುಸೂಚಿತ ಬುಡಕಟ್ಟುಗಳಿಗೆ ಐತಿಹಾಸಿಕ ಅನ್ಯಾಯವಾಗಿ ಪರಿಣಮಿಸಿದ ವಸಾಹತುಶಾಹಿ ಹಾಗೂ ಸ್ವತಂತ್ರ ಭಾರತದ ಅವಧಿಯಲ್ಲಿನ ರಾಜ್ಯ ಅರಣ್ಯಗಳ ಕ್ರೋಢೀಕರಣದಲ್ಲಿ ಪಿತ್ರಾರ್ಜಿತ ಜಮೀನುಗಳ ಮತ್ತು ಅವರ ವಸತಿಯ ಮೇಲಿನ ಅರಣ್ಯ ಹಕ್ಕುಗಳನ್ನು ಸಾಕಷ್ಟು ಮಾನ್ಯ ಮಾಡಿಲ್ಲದಿರುವುದರಿಂದ;

ಮತ್ತು ರಾಜ್ಯ ಅಭಿವೃದ್ಧಿಗಾಗಿ ರಾಜ್ಯದ ಮಧ್ಯಪ್ರವೇಶದಿಂದಾಗಿ ತಮ್ಮ ವಾಸಸ್ಥಳವನ್ನು ಒತ್ತಾಯಕ್ಕೊಳಗಾಗಿ ಬೇರೆಡೆ ಸ್ಥಳಾಂತರಿಸಿದವರನ್ನು ಒಳಗೊಂಡು ಅರಣ್ಯವಾಸಿ ಅನುಸೂಚಿತ ಬುಡಕಟ್ಟುಗಳ ಬಹಳ ಕಾಲದಿಂದ ಉಳಿದಿರುವ ಆಸ್ತಿ ಹಿಡುವಳಿಯ ಅಭದ್ರತೆಯನ್ನು ಮತ್ತು ಹಕ್ಕುಗಳನ್ನು ಪಡೆಯಲು ನೆರವಾಗುವುದು ಅಗತ್ಯವಾಗಿರುವುದರಿಂದ

ಇದು ಭಾರತ ಗಣರಾಜ್ಯದ ಐವತ್ತಾರನೇ ವರ್ಷದಲ್ಲಿ ಸಂಸತ್ತಿನಿಂದ ಈ ಮುಂದಿನಂತೆ ಅಧಿನಿಯಮಿತವಾಗತಕ್ಕದ್ದು:–

## ಅಧ್ಯಾಯ – I
## ಪ್ರಾರಂಭಿಕ

**1. ಚಿಕ್ಕ ಹೆಸರು, ವ್ಯಾಪ್ತಿ ಮತ್ತು ಪ್ರಾರಂಭ:–** (1) ಈ ಅಧಿನಿಯಮವನ್ನು ಅನುಸೂಚಿತ ಬುಡಕಟ್ಟುಗಳ (ಅರಣ್ಯ ಹಕ್ಕುಗಳನ್ನು ಮಾನ್ಯ ಮಾಡುವ) ಅಧಿನಿಯಮ, 2005 ಎಂದು ಕರೆಯತಕ್ಕದ್ದು.

(2) ಇದು ಜಮ್ಮು ಮತ್ತು ಕಾಶ್ಮೀರ ರಾಜ್ಯವನ್ನು ಹೊರತುಪಡಿಸಿ ಇಡೀ ಭಾರತಕ್ಕೆ ವ್ಯಾಪ್ತವಾಗತಕ್ಕದ್ದು.

(3) ಇದು ಕೇಂದ್ರ ಸರ್ಕಾರವು ರಾಜಪತ್ರದಲ್ಲಿ ಅಧಿಸೂಚನೆಯ ಮೂಲಕ ಗೊತ್ತುಪಡಿಸಬಹುದಾದಂಥ ದಿನಾಂಕದಂದು ಜಾರಿಗೆ ಬರತಕ್ಕದ್ದು.

**2. ಪರಿಭಾಷೆಗಳು:–** ಈ ಅಧಿನಿಯಮದಲ್ಲಿ ಸಂದರ್ಭವು ಅನ್ಯಥಾ ಅಗತ್ಯಪಡಿಸಿದ ಹೊರತು,–

(ಎ) "ಸಕ್ಷಮ ಪ್ರಾಧಿಕಾರಿ" ಎಂದರೆ 4ನೇ ಪ್ರಕರಣದ (7)ನೇ ಉಪಪ್ರಕರಣದಲ್ಲಿ ಉಲ್ಲೇಖಿಸಲಾದ ವಿವಾದಗಳೊಂದಿಗೆ ವ್ಯವಹರಿಸಲು, ಅಧಿಸೂಚನೆಯ ಮೂಲಕ ಕೇಂದ್ರ ಸರ್ಕಾರವು ನೇಮಕ ಮಾಡಿದ ಯಾರೇ ಅಧಿಕಾರಿ ಅಥವಾ ಪ್ರಾಧಿಕಾರಿ;

(ಬಿ) "ಮುಖ್ಯ ಪ್ರದೇಶಗಳು" ಎಂದರೆ ಅಧಿಸೂಚನೆಯ ಮೂಲಕ ಪರಿಸರ ಮತ್ತು ಅರಣ್ಯಗಳೊಂದಿಗೆ ವ್ಯವಹರಿಸುವ ಕೇಂದ್ರ ಸರ್ಕಾರದ ಮಂತ್ರಾಲಯವು ನಿರ್ಧರಿಸಬಹುದಾದ ವನ್ಯಜೀವಿ ಸಂರಕ್ಷಣೆಯ ಉದ್ದೇಶಗಳಿಗಾಗಿ ಅನುಲ್ಲಂಘನೀಯವಾಗಿ ಇಡಲು ಅಗತ್ಯಪಡಿಸಲಾದ ರಾಷ್ಟ್ರೀಯ ಉದ್ಯಾನಗಳು ಮತ್ತು ಅಭಯಾರಣ್ಯಗಳಂಥ ಪ್ರದೇಶಗಳು;

(ಸಿ) "ಅರಣ್ಯವಾಸಿ ಅನುಸೂಚಿತ ಬುಡಕಟ್ಟುಗಳು" ಎಂದರೆ ಪ್ರಧಾನವಾಗಿ ಅರಣ್ಯಗಳಲ್ಲಿ ವಾಸಿಸುವ ಮತ್ತು ಅನುಸೂಚಿತ ಬುಡಕಟ್ಟಿನ ಹಳ್ಳಿಗಾಡಿನ ಸಮುದಾಯಗಳನ್ನು ಒಳಗೊಂಡಿರುವ ಮತ್ತು ವಾಸ್ತವಿಕ ಜೀವನೋಪಾಯ ಅವಶ್ಯಕತೆಗಳಿಗಾಗಿ ಅರಣ್ಯಗಳ ಅಥವಾ ಅರಣ್ಯ ಜಮೀನಿನ ಮೇಲೆ ಅವಲಂಬಿತವಾಗಿರುವ ಅನುಸೂಚಿತ ಬುಡಕಟ್ಟುಗಳ ಸದಸ್ಯರು ಅಥವಾ ಸಮುದಾಯ;

(ಡಿ) "ಅರಣ್ಯ ಜಮೀನು" ಎಂದರೆ ಯಾವುದೇ ಅರಣ್ಯ ಪ್ರದೇಶದೊಳಗೆ ಬರುವ ಯಾವುದೇ ಬಗೆಯ ಜಮೀನು ಮತ್ತು ಇದು ಅವರ್ಗೀಕೃತ ಅರಣ್ಯಗಳು, ಗಡಿ ಗುರುತು ಮಾಡಿರದ ಅರಣ್ಯಗಳು, ಅಸ್ತಿತ್ವದಲ್ಲಿರುವ ಅಥವಾ ಭಾವಿತ ಅರಣ್ಯಗಳು, ಸಂರಕ್ಷಿತ ಅರಣ್ಯಗಳು, ಕಾಯ್ದಿರಿಸಿದ ಅರಣ್ಯಗಳು, ಅಭಯಾರಣ್ಯಗಳು ಮತ್ತು ರಾಷ್ಟ್ರೀಯ ಉದ್ಯಾನಗಳು;

(ಇ) "ಅರಣ್ಯ ಹಕ್ಕುಗಳು" ಎಂದರೆ 3ನೇ ಪ್ರಕರಣದಲ್ಲಿ ಉಲ್ಲೇಖಿಸಲಾದ ಅರಣ್ಯ ಹಕ್ಕುಗಳು;

(ಎಫ್) "ಅರಣ್ಯ ಗ್ರಾಮಗಳು" ಎಂದರೆ, ಅರಣ್ಯ ಕಾರ್ಯಾಚರಣೆಗಳಿಗಾಗಿ ಯಾವುದೇ ರಾಜ್ಯ ಸರ್ಕಾರದ ಅರಣ್ಯ ಇಲಾಖೆಯು ಅರಣ್ಯಗಳ ಒಳಗೆ ಸ್ಥಾಪಿಸಿರುವ ಅಥವಾ ಅರಣ್ಯ ಮೀಸಲು ಪ್ರಕ್ರಿಯೆಯ ಮೂಲಕ ಅರಣ್ಯ ಗ್ರಾಮಗಳಾಗಿ ಪರಿವರ್ತಿತವಾಗಿರುವ ನೆಲಸು ಪ್ರದೇಶಗಳು ಮತ್ತು ಇದು ಅರಣ್ಯ ಗ್ರಾಮಗಳು, ನಿಗದಿಗೊಳಿಸಿದ ಮಾಗಣಿ ಹಿಡುವಳಿಗಳು, ಎಲ್ಲ ರೀತಿಯ ಟಾಂಗ್ಯಾ ನೆಲಸು ಪ್ರದೇಶಗಳು, ಯಾವುದೇ ಹೆಸರಿನಿಂದ ಕರೆಯಲಿ ಅಂಥ ಗ್ರಾಮಗಳನ್ನು ಒಳಗೊಳ್ಳುತ್ತವೆ ಮತ್ತು ಸಾಗುವಳಿಗಾಗಿ ಮತ್ತು ಇತರ ಬಳಕೆಗಾಗಿ ಸರ್ಕಾರವು ಅನುಮತಿ ನೀಡಿರುವ ಭೂಮಿಯನ್ನು ಒಳಗೊಳ್ಳುತ್ತವೆ;

(ಜಿ) "ಗ್ರಾಮ ಸಭಾ" ಎಂದರೆ ಒಂದು ಗ್ರಾಮದ ಎಲ್ಲ ವಯಸ್ಕ ಸದಸ್ಯರನ್ನು ಒಳಗೊಂಡಿರುವ ಗ್ರಾಮ ಸಭೆ ಮತ್ತು ಪಂಚಾಯಿತಿಗಳು ಇಲ್ಲದಿರುವ ರಾಜ್ಯಗಳ ಸಂದರ್ಭದಲ್ಲಿ ಸಾಂಪ್ರದಾಯಿಕ ಗ್ರಾಮ ಸಂಸ್ಥೆಗಳು;

(ಹೆಚ್) "ವಸತಿ"ಯು, ರೂಢಿಗತ ವಸತಿ ಮತ್ತು ಆದಿ ಬುಡಕಟ್ಟು ಗುಂಪುಗಳ ಮತ್ತು ಕೃಷಿಪೂರ್ವ ಸಮುದಾಯಗಳ ಮತ್ತು ಇತರ ಅರಣ್ಯವಾಸಿ ಅನುಸೂಚಿತ ಬುಡಕಟ್ಟುಗಳ ಮೀಸಲು ಅರಣ್ಯಗಳಲ್ಲಿನ ಮತ್ತು ಸಂರಕ್ಷಿತ ಅರಣ್ಯಗಳಲ್ಲಿನ ಅಂಥ ಇತರ ವಸತಿಗಳನ್ನು ಒಳಗೊಂಡಿರುವ ಪ್ರದೇಶವನ್ನು ಒಳಗೊಳ್ಳುತ್ತವೆ;

(ಐ) "ಲಘು ಅರಣ್ಯ ಉತ್ಪನ್ನಗಳು" ಬಿದಿರು, ಕುರುಚಲು ಗಿಡ, ತುಂಡು ಮರ, ಬೆತ್ತ, ಟಸ್ಸಾಲ್, ರೇಷ್ಮೆ ಗೂಡು, ಜೇನು, ಮೇಣ, ಅರಗು, ಟೆಂಡು ಅಥವಾ ಕೆಂಡು ಎಲೆಗಳು, ಔಷಧೀಯ ಸಸ್ಯಗಳು ಮತ್ತು ಗಿಡಮೂಲಿಕೆಗಳು, ಬೇರುಗಳು, ಗೆಡ್ಡೆಗಳು ಮತ್ತು ಅಂಥವುಗಳನ್ನು ಒಳಗೊಂಡಿರುವ ಸಸ್ಯ ಮೂಲದ, ಮರಮುಟ್ಟಲ್ಲದ ಎಲ್ಲ ಅರಣ್ಯ ಉತ್ಪನ್ನಗಳನ್ನು ಒಳಗೊಳ್ಳುತ್ತದೆ;

(ಜೆ) "ನೋಡಲ್ ಏಜೆನ್ಸಿ" ಎಂದರೆ 12ನೇ ಪ್ರಕರಣದಲ್ಲಿ ನಿರ್ದಿಷ್ಟಪಡಿಸಲಾದ ನೋಡಲ್ ಏಜೆನ್ಸಿ;

(ಕೆ) " ಅಧಿಸೂಚನೆ " ಎಂದರೆ ರಾಜಪತ್ರದಲ್ಲಿ ಪ್ರಕಟಿಸಲಾದ ಅಧಿಸೂಚನೆ;

(ಎಲ್) "ನಿಯಮಿಸಲಾದುದು" ಎಂದರೆ ಈ ಅಧಿನಿಯಮದ ಅಡಿಯಲ್ಲಿ ರಚಿಸಲಾದ ನಿಯಮಗಳ ಮೂಲಕ ನಿಯಮಿಸಲಾದುದು;

(ಎಂ) "ಅನುಸೂಚಿತ ಪ್ರದೇಶಗಳು" ಎಂದರೆ ಸಂವಿಧಾನದ 244ನೇ ಅನುಚ್ಛೇದದ (1)ನೇ ಖಂಡದಲ್ಲಿ ಉಲ್ಲೇಖಿಸಿದ ಅನುಸೂಚಿತ ಪ್ರದೇಶಗಳು;

(ಎನ್) "ಸಮರ್ಥನೀಯ ಬಳಕೆ"ಯು ಜೈವಿಕ ವೈವಿಧ್ಯ ಅಧಿನಿಯಮ, 2002 (2003ರ 18)ರ 2ನೇ ಪ್ರಕರಣದಲ್ಲಿನ (ಒ) ಖಂಡದಲ್ಲಿ ಅದಕ್ಕೆ ಗೊತ್ತುಪಡಿಸಿರುವಂಥ ಅರ್ಥವನ್ನೇ ಹೊಂದಿರತಕ್ಕದ್ದು;

(ಒ) "ಗ್ರಾಮ" ಎಂದರೆ,–

(i) ಪಂಚಾಯತಿಗಳ (ಅನುಸೂಚಿತ ಪ್ರದೇಶಗಳಿಗೆ ವಿಸ್ತರಿಸುವ) ಅಧಿನಿಯಮ, 1996ರ (1996ರ 40) ಉಪಬಂಧಗಳ 4ನೇ ಪ್ರಕರಣದ (ಬಿ) ಖಂಡದಲ್ಲಿ ಉಲ್ಲೇಖಿಸಿರುವ ಒಂದು ಗ್ರಾಮ; ಅಥವಾ

(ii) ಅನುಸೂಚಿತ ಪ್ರದೇಶಗಳಿಗಿಂತ ಬೇರೆಯಾದ ಪಂಚಾಯತಿಗಳಿಗೆ ಸಂಬಂಧಿಸಿದ ಯಾವುದೇ ರಾಜ್ಯದ ಕಾನೂನಿನಲ್ಲಿ ಗ್ರಾಮ ಎಂದು ಉಲ್ಲೇಖಿತವಾಗಿರುವ ಯಾವುದೇ ಪ್ರದೇಶ; ಅಥವಾ

(iii) ಅರಣ್ಯ ಗ್ರಾಮಗಳು, ಹಳೆಯ ವಸತಿಗಳು ಅಥವಾ ವಸತಿಗಳು ಮತ್ತು ಗ್ರಾಮ ಎಂದು ಅಧಿಸೂಚಿತವಾಗಿರಲಿ ಅಥವಾ ಇಲ್ಲದಿರಲಿ, ಮೋಜಣಿ ಮಾಡಿರದ ಗ್ರಾಮಗಳು; ಅಥವಾ

(iv) ಪಂಚಾಯಿತಿಗಳು ಇಲ್ಲದಿರುವ ರಾಜ್ಯಗಳ ಸಂದರ್ಭದಲ್ಲಿ ಯಾವುದಾದರೂ ಹೆಸರಿನಿಂದ ಕರೆಯಲಾಗುವ ಸಾಂಪ್ರದಾಯಿಕ ಗ್ರಾಮ;

(ಪಿ) "ವನ್ಯಪ್ರಾಣಿ" ಎಂದರೆ ವನ್ಯಜೀವಿ (ಸಂರಕ್ಷಣೆ) ಅಧಿನಿಯಮ, 1972ರ Iರಿಂದ IVನೇ ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಿರುವ ಮತ್ತು ಸ್ವಭಾವತಃ ಉಗ್ರ ಜಾತಿಯ ಯಾವುದೇ ಪ್ರಾಣಿ.

## ಅಧ್ಯಾಯ – II
## ಅರಣ್ಯ ಹಕ್ಕುಗಳು

3. **ಪರಿಭಾಷಿಸಲಾದ ಅರಣ್ಯವಾಸಿ ಅನುಸೂಚಿತ ಬುಡಕಟ್ಟುಗಳ ಅರಣ್ಯ ಹಕ್ಕುಗಳು:–** ಈ ಅಧಿನಿಯಮದ ಉದ್ದೇಶಗಳಿಗಾಗಿ ವ್ಯಕ್ತಿಗತ ಅಥವಾ ಸಮುದಾಯ ಒಡೆತನ ಅಥವಾ ಎರಡನ್ನೂ ಪಡೆದಿರುವ ಈ ಮುಂದಿನ ಹಕ್ಕುಗಳು ಅರಣ್ಯವಾಸಿ ಅನುಸೂಚಿತ ಬುಡಕಟ್ಟುಗಳ ಅರಣ್ಯ ಹಕ್ಕುಗಳಾಗಿರತಕ್ಕದ್ದು, ಎಂದರೆ:–

(ಎ) ಅರಣ್ಯವಾಸಿ ಅನುಸೂಚಿತ ಬುಡಕಟ್ಟಿನ ಸದಸ್ಯ ಅಥವಾ ಸದಸ್ಯರುಗಳು ವಾಸ ಮಾಡುವುದಕ್ಕಾಗಿ ಅಥವಾ ಜೀವನ ನಿರ್ವಹಣೆಗಾಗಿ ಸ್ವ–ಸಾಗುವಳಿಗಾಗಿ ವ್ಯಕ್ತಿಗತ ಅಥವಾ ಸಮುದಾಯ ಅನುಭೋಗದ ಅಡಿಯಲ್ಲಿ ಅರಣ್ಯ ಜಮೀನನ್ನು ಹೊಂದುವ ಮತ್ತು ಅಲ್ಲಿ ಜೀವಿಸುವ ಹಕ್ಕು;

(ಬಿ) ಹಿಂದಿನ ರಾಜ–ಮಹಾರಾಜರ ರಾಜ್ಯಗಳಲ್ಲಿ ಜಮೀನುದಾರಿ ಅಥವಾ ಅಂತಹ ಮಧ್ಯಂತರ ಪ್ರಭುತ್ವಗಳಲ್ಲಿ ಯಾವುದೇ ಹೆಸರಿನಿಂದ ಕರೆಯಲಾಗುತ್ತಿದ್ದ ಮತ್ತು ಪ್ರಯೋಗವಾಗುತ್ತಿದ್ದ ನಿಸ್ತಿರ್ ಮುಂತಾದ ಸಮುದಾಯ ಹಕ್ಕುಗಳು;

(ಸಿ) ಸಣ್ಣ ಅರಣ್ಯ ಉತ್ಪನ್ನಗಳನ್ನು ಉಪಯೋಗಿಸಲು ಅಥವಾ ವಿಲೆ ಮಾಡಲು ಮಾಲೀಕತ್ವ ಹೊಂದುವ ಹಕ್ಕು;

(ಡಿ) ಮೇಯಿಸುವ (ನೆಲೆಸಿರುವ ಮತ್ತು ವಲಸೆ ಬಂದಿರುವ) ಅಲೆಮಾರಿ ಮತ್ತು ಕುರುಬ ಸಮುದಾಯಗಳ ಸಂಪ್ರದಾಯಕ ಕಾಲಿಕ ಸಂಪನ್ಮೂಲಗಳನ್ನು ಹೊಂದುವಂಥ ಉಪಯೋಗಗಳು ಅಧಿಕಾರಗಳನ್ನು ಹೊಂದುವ ಇತರ ಸಮುದಾಯ ಹಕ್ಕುಗಳು;

(ಇ) ಪ್ರಾಚೀನ ಬುಡಕಟ್ಟು ಸಮೂಹಗಳಿಗೆ ಮತ್ತು ಕೃಷಿಪೂರ್ವ ಸಮುದಾಯಗಳಿಗೆ ವಸತಿ ಮತ್ತು ವಾಸಸ್ಥಳದ ಸಮುದಾಯ ಹಕ್ಕುಗಳನ್ನೊಳಗೊಂಡಿರುವ ಹಕ್ಕುಗಳು;

(ಎಫ್) ಕ್ಲೇಮುಗಳು ವಿವಾದಕ್ಕೊಳಪಟ್ಟಿರುವ ಯಾವುದೇ ರಾಜ್ಯದಲ್ಲಿ ಯಾವುದೇ ನಾಮಸೂಚಿ ಅಡಿಯಲ್ಲಿನ ವಿವಾದಿತ ಜಮೀನಿನಲ್ಲಿ ಅಥವಾ ಅದರ ಮೇಲಿನ ಹಕ್ಕುಗಳು;

(ಜಿ) ಯಾವುದೇ ಸ್ಥಳೀಯ ಪ್ರಾಧಿಕಾರ ಅಥವಾ ಯಾವುದೇ ರಾಜ್ಯ ಸರ್ಕಾರ ಅರಣ್ಯ ಜಮೀನುಗಳ ಮೇಲಿನ ಹಕ್ಕುಗಳ ಸಂಬಂಧದಲ್ಲಿ ನೀಡಿರುವ ಪಟ್ಟಾಗಳು ಅಥವಾ ಗುತ್ತಿಗೆ ಅಥವಾ ಮಂಜೂರಾತಿಗಳ ಪರಿವರ್ತನೆ ಹಕ್ಕುಗಳು;

(ಹೆಚ್) ಅರಣ್ಯ ಗ್ರಾಮಗಳನ್ನು ಕಂದಾಯ ಗ್ರಾಮಗಳನ್ನಾಗಿ ಪರಿವರ್ತಿಸುವ ಹಕ್ಕು;

(ಐ) ಅಧಿಸೂಚಿಸಿರುವ ಅಥವಾ ಅಧಿಸೂಚಿಸದಿರುವ ಹಳೆ ನೆಲಸು ಪ್ರದೇಶಗಳು ಮತ್ತು ಮೋಜಣಿ ಮಾಡದ ಗ್ರಾಮಗಳ ಆಸ್ತಿ ವ್ಯವಸ್ಥೆಯ ಹಕ್ಕುಗಳು;

(ಜೆ) ಸಮರ್ಥನೀಯವಾದ ಉಪಯೋಗಕ್ಕಾಗಿ ಅವರು ಸಾಂಪ್ರದಾಯಿಕವಾಗಿ ರಕ್ಷಿಸುತ್ತಿದ್ದ ಮತ್ತು ಸಂರಕ್ಷಣೆ ಮಾಡುತ್ತಿದ್ದ ಯಾವುದೇ ಸಮುದಾಯದ ಅರಣ್ಯ ಸಂಪನ್ಮೂಲದ ರಕ್ಷಣೆ, ಪುನರುತ್ಪಾದನೆ ಅಥವಾ ಸಂರಕ್ಷಣೆ ಅಥವಾ ನಿರ್ವಹಣೆಯ ಹಕ್ಕು;

(ಕೆ) ಯಾವುದೇ ರಾಜ್ಯ ಕಾನೂನಿನ ಅಥವಾ ಯಾವುದೇ ಸ್ವಾಯತ್ತ ಜಿಲ್ಲಾ ಪರಿಷತ್ತಿನ ಅಥವಾ ಸ್ವಾಯತ್ತ ಪ್ರಾದೇಶಿಕ ಪರಿಷತ್ತಿನ ಅಡಿಯಲ್ಲಿ ಮಾನ್ಯವಾಗಿರುವ ಹಕ್ಕುಗಳು ಅಥವಾ ಯಾವುದೇ ರಾಜ್ಯದ ಯಾವುದೇ ಸಾಂಪ್ರದಾಯಿಕ ಅಥವಾ ರೂಢಿಗತ ಕಾನೂನಿನ ಅಡಿಯಲ್ಲಿ ಬುಡಕಟ್ಟು ಜನಾಂಗದ ಹಕ್ಕುಗಳೆಂದು ಅಂಗೀಕೃತವಾಗಿರುವ ಹಕ್ಕುಗಳು;

(ಎಲ್) (ಎ)ಯಿಂದ (ಕೆ)ವರೆಗಿನ ಖಂಡಗಳಲ್ಲಿ ನಮೂದಿಸದಿರುವ ಆದರೆ ಯಾವುದೇ ಜಾತಿಯ ವನ್ಯಪ್ರಾಣಿಯನ್ನು ಭೇಟೆಯಾಡುವ ಅಥವಾ ಉಪಾಯದಿಂದ ಹಿಡಿಯುವ ಅಥವಾ ಅದರ ಶರೀರದ ಭಾಗವನ್ನು ತೆಗೆದುಕೊಳ್ಳುವ ಸಾಂಪ್ರದಾಯಿಕ ಹಕ್ಕನ್ನು ಹೊರತುಪಡಿಸಿ, ಅರಣ್ಯದಲ್ಲಿ ವಾಸಿಸುವ ಅನುಸೂಚಿತ ಬುಡಕಟ್ಟುಗಳಿಂದ ರೂಢಿಗತವಾಗಿ ಅನುಭವಿಸುತ್ತಿರುವ ಯಾವುದೇ ಇತರ ಸಾಂಪ್ರದಾಯಿಕ ಹಕ್ಕು.

## ಅಧ್ಯಾಯ – III
## ಅರಣ್ಯವಾಸಿ ಅನುಸೂಚಿತ ಬುಡಕಟ್ಟುಗಳ ಹಕ್ಕುಗಳು

4. **ಅರಣ್ಯವಾಸಿ ಅನುಸೂಚಿತ ಬುಡಕಟ್ಟುಗಳಿಗೆ ಅರಣ್ಯ ಹಕ್ಕುಗಳನ್ನು ಮಾನ್ಯ ಮಾಡುವುದು ಮತ್ತು ನಿಹಿತಗೊಳಿಸುವುದು:–** (1) ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಇತರ ಕಾನೂನಿನಲ್ಲಿ ಏನೇ ಇದ್ದರೂ ಮತ್ತು ಈ ಅಧಿನಿಯಮದ ಉಪಬಂಧಗಳಿಗೊಳಪಟ್ಟು, ಕೇಂದ್ರ ಸರ್ಕಾರವು ನಿಗದಿಪಡಿಸಬಹುದಾದಂತಹ ರೀತಿಯಲ್ಲಿ ಸಣ್ಣ ಅರಣ್ಯ

ಉತ್ಪನ್ನಗಳ ಸಂಗ್ರಹಣೆ, ಉಪಯೋಗ ಅಥವಾ ವರ್ಗಾವಣೆಯ ಹಕ್ಕನ್ನು ಒಳಗೊಂಡು ಅರಣ್ಯ ಜಮೀನು ಮತ್ತು ಅರಣ್ಯವಾಸಿ ಅನುಸೂಚಿತ ಬುಡಕಟ್ಟು ವಸತಿಯ ಸಂಬಂಧದಲ್ಲಿ ಹಕ್ಕುಗಳು ಅಧಿಸೂಚಿತವಾಗಿರುವಲ್ಲಿ ಅರಣ್ಯ ಹಕ್ಕುಗಳನ್ನು ಅರಣ್ಯವಾಸಿ ಅನುಸೂಚಿತ ಬುಡಕಟ್ಟುಗಳಿಗೆ ಈ ಮೂಲಕ ಮಾನ್ಯ ಮಾಡುತ್ತದೆ ಮತ್ತು ನಿಹಿತಗೊಳಿಸುತ್ತದೆ.

ಪರಂತು ರಾಷ್ಟ್ರೀಯ ಉದ್ಯಾನವನಗಳು ಮತ್ತು ಅಭಯಾರಣ್ಯಗಳ ಪ್ರಮುಖ ಪ್ರದೇಶಗಳಲ್ಲಿ ನಿಹಿತಗೊಳಿಸುವುದಕ್ಕಾಗಿ ಈ ಅಧಿನಿಯಮದ ಮೇರೆಗೆ ನಿರ್ಧರಿಸಲಾದ ಅರಣ್ಯ ಹಕ್ಕುಗಳನ್ನು ಈ ಅಧಿನಿಯಮ ಜಾರಿಗೆ ಬಂದ ದಿನಾಂಕದಿಂದ ಐದು ವರ್ಷಗಳ ಅವಧಿಗೆ ತಾತ್ಕಾಲಿಕ ಆಧಾರದ ಮೇಲೆ ಮಂಜೂರು ಮಾಡತಕ್ಕದ್ದು.

ಮತ್ತೂ ಪರಂತು, ಅಂತಹ ಪ್ರಮುಖ ಪ್ರದೇಶಗಳಲ್ಲಿನ ಅಂತಹ ತಾತ್ಕಾಲಿಕ ಹಕ್ಕುಗಳು, ಅಂತಹ ಹಕ್ಕುಗಳ ಧಾರಕರನ್ನು ಯುಕ್ತ ಪರಿಹಾರದ ಸಹಿತ ಸದರಿ ಅವಧಿಯೊಳಗಾಗಿ ಪುನರ್ ಪತ್ತೆ ಹಚ್ಚದಿದ್ದಲ್ಲಿ ಖಾಯಂ ಆಗತಕ್ಕದ್ದು.

(2) ಅರಣ್ಯ ಜಮೀನು ಮತ್ತು ಅವುಗಳ ವಸತಿಗೆ ಸಂಬಂಧಿಸಿದಂತೆ ಯಾವುದೇ ರಾಜ್ಯ ಅಥವಾ ಕೇಂದ್ರಾಡಳಿತ ಪ್ರದೇಶಕ್ಕೆ ಸಂಬಂಧಿಸಿದ ಅರಣ್ಯವಾಸಿ ಅನುಸೂಚಿತ ಬುಡಕಟ್ಟುಗಳಿಗೆ ಈ ಅಧಿನಿಯಮದ ಮೇರೆಗೆ ಅರಣ್ಯ ಹಕ್ಕುಗಳ ಮಾನ್ಯತೆ ಮತ್ತು ನಿಹಿತಗೊಳಿಸುವಿಕೆಯು ಅಂತಹ ಅನುಸೂಚಿತ ಬುಡಕಟ್ಟುಗಳು ಅಥವಾ ಬುಡಕಟ್ಟು ಸಮುದಾಯಗಳು 25ನೇ ಅಕ್ಟೋಬರ್ 1980ಕ್ಕೆ ಮೊದಲು ಅರಣ್ಯ ಜಮೀನಿನ ಅಧಿಭೋಗದಲ್ಲಿದ್ದರೆಂಬ ಷರತ್ತಿಗೆ ಒಳಪಟ್ಟಿರತಕ್ಕದ್ದು.

(3) (1)ನೇ ಉಪಪ್ರಕರಣದಿಂದ ಪ್ರದತ್ತವಾದ ಹಕ್ಕು ಅನುವಂಶೀಯವಾಗಿರತಕ್ಕದ್ದು. ಆದರೆ ಪರಭಾರೆ ಮಾಡುವಂತಿಲ್ಲ ಅಥವಾ ವರ್ಗಾವಣೆ ಮಾಡುವಂತಿಲ್ಲ.

(4) ಅನ್ಯಥಾ ಉಪಬಂಧಿಸಿದುದನ್ನುಳಿದು, ಯಾರೇ ಅರಣ್ಯವಾಸಿ ಅನುಸೂಚಿತ ಬುಡಕಟ್ಟು ಸದಸ್ಯನನ್ನು ನಿಯಮಿಸಬಹುದಾದಂತಹ ರೀತಿಯಲ್ಲಿ ಮಾನ್ಯತೆ ಮತ್ತು ಪರಿಶೀಲನಾ ಕಾರ್ಯವಿಧಾನ ಸಂಪೂರ್ಣವಾಗುವವರೆಗೆ, ಅವನ ಅಧಿಭೋಗದಲ್ಲಿರುವ ಅರಣ್ಯ ಜಮೀನಿನಿಂದ ಒಕ್ಕಲೆಬ್ಬಿಸತಕ್ಕದ್ದಲ್ಲ ಅಥವಾ ಹೊರಹಾಕತಕ್ಕದ್ದಲ್ಲ.

(5) (1)ನೇ ಉಪಪ್ರಕರಣದಿಂದ ಮಾನ್ಯವಾಗಿರುವ ಮತ್ತು ನಿಹಿತಗೊಳಿಸಲಾದ ಅರಣ್ಯ ಹಕ್ಕುಗಳು 3ನೇ ಪ್ರಕರಣದ (ಎ) ಖಂಡದಲ್ಲಿ ನಮೂದಿಸಿರುವ ಜಮೀನಿಗೆ ಸಂಬಂಧಿಸಿದ್ದಲ್ಲಿ,–

(i) ಅಂತಹ ಜಮೀನು ಈ ಅಧಿನಿಯಮದ ಪ್ರಾರಂಭದ ದಿನಾಂಕದಂದು ವ್ಯಕ್ತಿ ಅಥವಾ ಕುಟುಂಬ ಅಥವಾ ಸಮುದಾಯದ ಅಧಿಭೋಗದ ಅಡಿಯಲ್ಲಿರತಕ್ಕದ್ದು ಮತ್ತು ವಾಸ್ತವಿಕ ಅಧಿಭೋಗದ ಅಡಿಯಲ್ಲಿರುವ ಪ್ರದೇಶಕ್ಕೆ ಸೀಮಿತವಾಗತಕ್ಕದ್ದು ಮತ್ತು ಯಾವುದೇ ಸಂದರ್ಭದಲ್ಲೂ ಅರಣ್ಯವಾಸಿ ಅನುಸೂಚಿತ ಬುಡಕಟ್ಟಿನ ಪ್ರತಿಯೊಂದು ಬಿಡಿ ಸಂಸಾರಕ್ಕೆ ಎರಡೂವರೆ ಹೆಕ್ಟೇರ್ ಪ್ರದೇಶವನ್ನು ಮೀರತಕ್ಕದ್ದಲ್ಲ;

(ii) ನೀಡಲಾದ ವಿಸ್ತೀರ್ಣದ ಹಕ್ಕನ್ನು ವಿವಾಹಿತ ವ್ಯಕ್ತಿಗಳಾಗಿದ್ದಲ್ಲಿ ಪತಿ–ಪತ್ನಿಯರಿಬ್ಬರ ಹೆಸರಿನಲ್ಲಿ ಜಂಟಿಯಾಗಿ ಮತ್ತು ಏಕಸದಸ್ಯ ಕುಟುಂಬವಾಗಿದ್ದಲ್ಲಿ ಏಕವ್ಯಕ್ತಿಯ ಹೆಸರಿನಲ್ಲಿ ನೋಂದಣಿ ಮಾಡತಕ್ಕದ್ದು;

(6) ಅರಣ್ಯವಾಸಿ ಅನುಸೂಚಿತ ಬುಡಕಟ್ಟಿನಲ್ಲಿ (1)ನೇ ಉಪಪ್ರಕರಣದಿಂದ ಮಾನ್ಯವಾದ ಮತ್ತು ನಿಹಿತವಾದ ಅರಣ್ಯ ಹಕ್ಕುಗಳನ್ನು,–

(i) ನಿಹಿತಗೊಳಿಸುವಷ್ಟರಮಟ್ಟಿಗೆ ಮಾತ್ರ ಚಲಾಯಿಸತಕ್ಕದ್ದು;

(ii) ಯಾವುದರಲ್ಲಿ ಸಮುದಾಯ ಹಕ್ಕುಗಳು ನಿಹಿತವಾಗಿವೆಯೋ ಆ ಸಮುದಾಯದ ಅಕ್ಕಪಕ್ಕದ ಅರಣ್ಯಗಳ ಸಮರ್ಥ ಬಳಕೆ ಮತ್ತು ಪುನರ್‌ನಿರ್ಮಾಣದ ಸಹಿತ ರಕ್ಷಣೆ, ಸಂರಕ್ಷಣೆಯ ಜವಾಬ್ದಾರಿ ಮತ್ತು ಅಧಿಕಾರವನ್ನು ಒಳಗೊಂಡಿರುತ್ತದೆ;

(7) (1)ನೇ ಉಪಪ್ರಕರಣದಿಂದ ಮಾನ್ಯವಾದ ಮತ್ತು ನಿಹಿತವಾದ ಯಾವುದೇ ಅರಣ್ಯ ಹಕ್ಕಿನ ಬಗ್ಗೆ ಯಾವುದೇ ರಾಜ್ಯ ಸರ್ಕಾರ ಅಥವಾ ಸ್ಥಳೀಯ ಪ್ರಾಧಿಕಾರ ವಿವಾದ ವ್ಯಕ್ತಪಡಿಸಿದಲ್ಲಿ, ಸಕ್ಷಮ ಪ್ರಾಧಿಕಾರವು ಪ್ರದೇಶವನ್ನು ಅನುಸೂಚಿತ ಪ್ರದೇಶವೆಂದು ಘೋಷಿಸುವ ಸಮಯದಲ್ಲಿ ಮತ್ತು ಯಾವುದೇ ಬುಡಕಟ್ಟಿನ ಸಾಕ್ಷ್ಯದ ಸಹಿತ ಸಂವಿಧಾನದ 342ನೇ ಅನುಚ್ಛೇದದ ಮೇರೆಗೆ ಅನುಸೂಚಿತ ಬುಡಕಟ್ಟೆಂದು ಅಥವಾ ಅನುಸೂಚಿತ ಬುಡಕಟ್ಟು ಎಂದು ಭಾವಿಸಲಾಗುವುದೆಂದು ಅಧಿಸೂಚಿಸುವ ಸಮಯದಲ್ಲಿ ಸಿದ್ಧಪಡಿಸಲಾದ ದಾಖಲೆಗಳನ್ನು ಪರಿಶೀಲಿಸತಕ್ಕದ್ದು, ಆನಂತರ ಈ ವಿಷಯವದಲ್ಲಿ ಸಮುಚಿತ ಆದೇಶವನ್ನು ಹೊರಡಿಸತಕ್ಕದ್ದು.

ಪರಂತು ಬಾಧಿತರಾದ ಸಮುದಾಯದ ಸದಸ್ಯ ಅಥವಾ ಸದಸ್ಯರುಗಳಿಗೆ ಅಹವಾಲು ಹೇಳಿಕೊಳ್ಳಲು ಅವಕಾಶ ನೀಡಿದ ಹೊರತು, ಯಾವುದೇ ಅರಣ್ಯ ಹಕ್ಕನ್ನು ಮಂಜೂರು ಮಾಡಲು ನಿರಾಕರಿಸತಕ್ಕದ್ದಲ್ಲ.

(8) ಅರಣ್ಯ ಜಮೀನಿನ ನಿವ್ವಳ ಪ್ರಸ್ತುತ ಮೌಲ್ಯ ಮತ್ತು ಅದರ ಪರಿವರ್ತನೆಗಾಗಿ ಪರಿಹಾರಾತ್ಮಕ ಅರಣ್ಯ ನಿರ್ಮಾಣವನ್ನೊಳಗೊಂಡು ಅರಣ್ಯ ಹಕ್ಕುಗಳನ್ನು ಎಲ್ಲಾ ಪೂರ್ವಾಧಿಗಳಿಂದ ಮುಕ್ತಗೊಳಿಸಿ ಪ್ರದತ್ತಗೊಳಿಸತಕ್ಕದ್ದು.

**5. ಅರಣ್ಯ ಹಕ್ಕುಗಳ ಧಾರಕರ ಕರ್ತವ್ಯಗಳು:–** ಈ ಅಧಿನಿಯಮದ ಮೇರೆಗೆ ಯಾವುದೇ ಅರಣ್ಯ ಹಕ್ಕಿನ ಧಾರಕನು,–

(ಎ) ಅಂತಹ ಹಕ್ಕುಗಳ ಮೇರೆಗೆ ಅನುಮತಿಸಲಾದಂತಹ ಚಟುವಟಿಕೆಗಳನ್ನು ಹೊರತುಪಡಿಸಿ ಪುನರ್‌ಅರಣ್ಯ ನಿರ್ಮಾಣವನ್ನೊಳಗೊಂಡು ಯಾವುದೇ ಅರಣ್ಯೇತರ ಉದ್ದೇಶಕ್ಕಾಗಿ ಅರಣ್ಯ ಜಮೀನನ್ನು ತೆರವುಗೊಳಿಸುವುದು ಅಥವಾ ಆ ಭೂಮಿಯಲ್ಲಿ ಸ್ವಾಭಾವಿಕವಾಗಿ ಬೆಳೆದ ಮರಗಳನ್ನು ಕತ್ತರಿಸುವುದನ್ನೊಳಗೊಂಡು ಸ್ಥಳೀಯ ಪ್ರದೇಶದಲ್ಲಿ ವನ್ಯಪ್ರಾಣಿಗಳು, ಅರಣ್ಯ ಮತ್ತು ಜೈವಿಕ ವೈವಿಧ್ಯತೆಗೆ ಪ್ರತಿಕೂಲ ಪರಿಣಾಮ ಬೀರುವ ಯಾವುದೇ ಚಟುವಟಿಕೆಯಲ್ಲಿ ತೊಡಗತಕ್ಕದ್ದಲ್ಲ;

(ಬಿ) ಅಕ್ಕಪಕ್ಕದ ನೀರು ಪೂರೈಕೆ ಪ್ರದೇಶಗಳು, ನೀರಿನ ಸಂಪನ್ಮೂಲಗಳು ಮತ್ತು ಇತರ ಜೀವಿಪರಿಸ್ಥಿತಿಯ ಸೂಕ್ಷ್ಮ ಪ್ರದೇಶಗಳನ್ನು ಸಮರ್ಪಕವಾಗಿ ರಕ್ಷಿಸಲಾಗಿದೆಯೆಂದು ಖಚಿತಪಡಿಸತಕ್ಕದ್ದು;

(ಸಿ) ಅರಣ್ಯವಾಸಿ ಅನುಸೂಚಿತ ಬುಡಕಟ್ಟುಗಳ ವಸತಿಯನ್ನು ಅವರ ಸಾಂಸ್ಕೃತಿಕ ಮತ್ತು ನೈಸರ್ಗಿಕ ಸಂರಕ್ಷಣೆಗೆ ಬಾಧಕವಾಗುವ ಯಾವುದೇ ವಿನಾಶಕಾರಿ ಪದ್ಧತಿಗಳ ವಿಧಾನದಿಂದ ಸಂರಕ್ಷಿಸಲಾಗಿದೆಯೆಂದು ಖಚಿತಪಡಿಸತಕ್ಕದ್ದು;

(ಡಿ) (i) ವನ್ಯಜೀವಿ (ಸಂರಕ್ಷಣೆ) ಅಧಿನಿಯಮ, 1972 (1972ರ 53); ಅಥವಾ

(ii) ವನ್ಯಜೀವಿ (ಸಂರಕ್ಷಣೆ) ಅಧಿನಿಯಮ, 1980 (1980ರ 69); ಅಥವಾ

(iii) ಜೈವಿಕ ವೈವಿಧ್ಯತೆ ಅಧಿನಿಯಮ, 2002 (2003ರ 18)

– ಇವುಗಳ ಯಾವುದೇ ಉಪಬಂಧಗಳನ್ನು ಉಲ್ಲಂಘನೆ ಮಾಡುವ ಯಾವುದೇ ಚಟುವಟಿಕೆಯನ್ನು ಗ್ರಾಮಸಭೆಗೆ ಮತ್ತು ಅರಣ್ಯ ಪ್ರಾಧಿಕಾರಿಗಳಿಗೆ ತಿಳಿಸತಕ್ಕದ್ದು.

(ಇ) ಸಮುದಾಯ ಅರಣ್ಯ ಸಂಪನ್ಮೂಲ ಬಳಕೆಯನ್ನು ನಿಯಂತ್ರಿಸಲು ಮತ್ತು ವನ್ಯಪ್ರಾಣಿಗಳು, ಅರಣ್ಯ ಮತ್ತು ಜೈವಿಕ ವೈವಿಧ್ಯತೆಗೆ ಪ್ರತಿಕೂಲ ಪರಿಣಾಮಗಳನ್ನು ಬೀರುವ ಯಾವುದೇ ಚಟುವಟಿಕೆಯನ್ನು ನಿಲ್ಲಿಸಲು ಗ್ರಾಮ ಸಭೆಯಲ್ಲಿ ಕೈಗೊಂಡ ನಿರ್ಣಯಗಳನ್ನು ಪಾಲಿಸಲಾಗಿದೆ ಎಂಬುದನ್ನು ಖಚಿತಪಡಿಸಿಕೊಳ್ಳತಕ್ಕದ್ದು;

## ಅಧ್ಯಾಯ –IV

## ಅರಣ್ಯ ಹಕ್ಕುಗಳನ್ನು ನಿಹಿತಗೊಳಿಸುವ ಪ್ರಾಧಿಕಾರಗಳು ಮತ್ತು ಪ್ರಕ್ರಿಯೆ

**6. ಅರಣ್ಯವಾಸಿ ಅನುಸೂಚಿತ ಬುಡಕಟ್ಟುಗಳಲ್ಲಿ ಹಕ್ಕುಗಳನ್ನು ನಿಹಿತಗೊಳಿಸುವ ಪ್ರಾಧಿಕಾರಗಳು ಮತ್ತು ಅದರ ಪ್ರಕ್ರಿಯೆ:–** (1) ಈ ಅಧಿನಿಯಮದ ಮೇರೆಗೆ ತನ್ನ ಅಧಿಕಾರವ್ಯಾಪ್ತಿಯ ಸ್ಥಳೀಯ ಪರಿಮಿತಿಗಳೊಳಗೆ ಅರಣ್ಯವಾಸಿ ಅನುಸೂಚಿತ ಬುಡಕಟ್ಟುಗಳಿಗೆ ನೀಡಬಹುದಾದ ವೈಯಕ್ತಿಕ ಅಥವಾ ಸಾಮುದಾಯಿಕ ಅಥವಾ ಆ ಎರಡೂ ಅರಣ್ಯ ಹಕ್ಕುಗಳ ಸ್ವರೂಪ ಮತ್ತು ವ್ಯಾಪ್ತಿಯನ್ನು ನಿರ್ಧರಿಸುವುದಕ್ಕಾಗಿ, ಅಂಥ ಹಕ್ಕುಗಳನ್ನು ಚಲಾಯಿಸಲು ನಿಗದಿಪಡಿಸಬಹುದಾದಂಥ ರೀತಿಯಲ್ಲಿ ಕ್ಲೇಮುಗಳನ್ನು ಸ್ವೀಕರಿಸುವ ಮೂಲಕ, ಅವುಗಳನ್ನು ಕ್ರೋಡೀಕರಿಸುವ ಮತ್ತು ಪರಿಶೀಲಿಸುವ ಮೂಲಕ ಮತ್ತು ಶಿಫಾರಸು ಮಾಡಿದ ಪ್ರತಿಯೊಂದು ಕ್ಲೇಮಿನ ಪ್ರದೇಶವನ್ನು ರೇಖಾಚಿತ್ರದಲ್ಲಿ ನಕ್ಷೆಯನ್ನು ಸಿದ್ಧಪಡಿಸುವ ಮೂಲಕ ಗ್ರಾಮ ಸಭೆಯು ಆ ಪ್ರಕ್ರಿಯೆಯನ್ನು ಪ್ರಾರಂಭಿಸುವ ಪ್ರಾಧಿಕಾರವಾಗಿರತಕ್ಕದ್ದು ಮತ್ತು ಆ ಗ್ರಾಮ ಸಭೆಯ ನಂತರ, ಆ ಬಗ್ಗೆ ಅದಕ್ಕೆ ಒಂದು ನಿರ್ಣಯವನ್ನು ಅಂಗೀಕರಿಸತಕ್ಕದ್ದು ಮತ್ತು ತದನಂತರ ಅದರ ಒಂದು ಪ್ರತಿಯನ್ನು ಉಪ–ವಿಭಾಗ ಮಟ್ಟದ ಸಮಿತಿಗೆ ಕಳುಹಿಸತಕ್ಕದ್ದು.

(2) ಗ್ರಾಮ ಸಭೆಯ ನಿರ್ಣಯದಿಂದ ಬಾಧಿತನಾದ ಯಾರೇ ವ್ಯಕ್ತಿಯು (3)ನೇ ಉಪಪ್ರಕರಣದ ಮೇರೆಗೆ ರಚಿತವಾದ ಉಪ–ವಿಭಾಗ ಮಟ್ಟದ ಸಮಿತಿಗೆ ಒಂದು ಅರ್ಜಿಯನ್ನು ಸಲ್ಲಿಸಬಹುದು ಮತ್ತು ಆ ಉಪ–ವಿಭಾಗ ಮಟ್ಟದ ಸಮಿತಿಯು ಅಂಥ ಅರ್ಜಿಯನ್ನು ಪರ್ಯಾಲೋಚಿಸತಕ್ಕದ್ದು ಮತ್ತು ವಿಲೆ ಮಾಡತಕ್ಕದ್ದು:

ಪರಂತು, ಅಂಥ ಪ್ರತಿಯೊಂದು ಅರ್ಜಿಯನ್ನು, ಗ್ರಾಮ ಸಭೆಯು ನಿರ್ಣಯವನ್ನು ಅಂಗೀಕರಿಸಿದ ದಿನಾಂಕದಿಂದ ಅರವತ್ತು ದಿನಗಳೊಳಗೆ ಸಲ್ಲಿಸತಕ್ಕದ್ದು:

ಮತ್ತೂ ಪರಂತು, ಅಂಥ ಅರ್ಜಿಯನ್ನು, ಅವನ ವಾದವನ್ನು ಮಂಡಿಸುವುದಕ್ಕೆ ಅವನಿಗೆ ಯುಕ್ತ ಅವಕಾಶವನ್ನು ಕೊಟ್ಟ ಹೊರತು, ಬಾಧಿತ ವ್ಯಕ್ತಿಯ ವಿರುದ್ಧ ವಿಲೆ ಮಾಡತಕ್ಕದ್ದಲ್ಲ.

(3) ರಾಜ್ಯ ಸರ್ಕಾರವು, ಗ್ರಾಮ ಸಭೆಯು ಅಂಗೀಕರಿಸಿದ ನಿರ್ಣಯವನ್ನು ಪರಿಶೀಲಿಸಲು ಒಂದು ಉಪ–ವಿಭಾಗ ಮಟ್ಟದ ಸಮಿತಿಯನ್ನು ರಚಿಸತಕ್ಕದ್ದು ಮತ್ತು ಅರಣ್ಯ ಹಕ್ಕುಗಳ ದಾಖಲೆಯನ್ನು ಸಿದ್ಧಪಡಿಸತಕ್ಕದ್ದು ಮತ್ತು ಅದನ್ನು ಅಂತಿಮ ತೀರ್ಮಾನಕ್ಕಾಗಿ ಉಪವಿಭಾಗೀಯ ಅಧಿಕಾರಿಯ ಮುಖಾಂತರ ಜಿಲ್ಲಾಮಟ್ಟದ ಸಮಿತಿಗೆ ಕಳುಹಿಸತಕ್ಕದ್ದು.

(4) ಉಪ–ವಿಭಾಗ ಮಟ್ಟದ ಸಮಿತಿಯ ನಿರ್ಣಯದಿಂದ ಬಾಧಿತನಾದ ಯಾರೇ ವ್ಯಕ್ತಿಯು, ಉಪ–ವಿಭಾಗ ಮಟ್ಟದ ಸಮಿತಿಯ ನಿರ್ಣಯದ ದಿನಾಂಕದಿಂದ ಅರವತ್ತು ದಿನಗಳೊಳಗಾಗಿ, ಜಿಲ್ಲಾಮಟ್ಟದ ಸಮಿತಿಗೆ ಅರ್ಜಿ ಸಲ್ಲಿಸಬಹುದು ಮತ್ತು ಆ ಜಿಲ್ಲಾಮಟ್ಟದ ಸಮಿತಿಯು ಅಂಥ ಅರ್ಜಿಯನ್ನು ಪರ್ಯಾಲೋಚಿಸತಕ್ಕದ್ದು ಮತ್ತು ವಿಲೆ ಮಾಡತಕ್ಕದ್ದು:

ಪರಂತು, ಗ್ರಾಮ ಸಭೆಯ ನಿರ್ಣಯದ ವಿರುದ್ಧ ಅದನ್ನು ಉಪ–ವಿಭಾಗ ಮಟ್ಟದ ಸಮಿತಿಯ ಮುಂದೆ ಸಲ್ಲಿಸಿದ ಮತ್ತು ಅದು ಪರ್ಯಾಲೋಚಿಸಿದ ಹೊರತು, ನೇರವಾಗಿ ಜಿಲ್ಲಾಮಟ್ಟದ ಸಮಿತಿಯ ಮುಂದೆ ಅರ್ಜಿಯನ್ನು ಸಲ್ಲಿಸತಕ್ಕದ್ದಲ್ಲ:

ಮತ್ತೂ ಪರಂತು, ಅಂಥ ಅರ್ಜಿಯನ್ನು, ಅವನ ವಾದವನ್ನು ಮಂಡಿಸಲು ಯುಕ್ತ ಅವಕಾಶವನ್ನು ಅವನಿಗೆ ನೀಡಿದ ಹೊರತು, ಬಾಧಿತ ವ್ಯಕ್ತಿಯ ವಿರುದ್ಧವಾಗಿ ವಿಲೆ ಮಾಡತಕ್ಕದ್ದಲ್ಲ.

(5) ರಾಜ್ಯ ಸರ್ಕಾರವು, ಉಪ–ವಿಭಾಗ ಮಟ್ಟದ ಸಮಿತಿಯು ಸಿದ್ಧಪಡಿಸಿದ ಅರಣ್ಯ ಹಕ್ಕುಗಳ ದಾಖಲೆಯನ್ನು ಪರ್ಯಾಲೋಚಿಸುವುದಕ್ಕಾಗಿ ಮತ್ತು ಅದನ್ನು ಅಂತಿಮವಾಗಿ ಅನುಮೋದಿಸುವುದಕ್ಕಾಗಿ ಒಂದು ಜಿಲ್ಲಾಮಟ್ಟದ ಸಮಿತಿಯನ್ನು ರಚಿಸತಕ್ಕದ್ದು.

(6) ಅರಣ್ಯ ಹಕ್ಕಿನ ದಾಖಲೆಯ ಮೇಲಿನ ಜಿಲ್ಲಾಮಟ್ಟದ ಸಮಿತಿಯ ನಿರ್ಣಯವು ಅಂತಿಮವಾಗಿರತಕ್ಕದ್ದು ಮತ್ತು ಬದ್ಧವಾಗಿರತಕ್ಕದ್ದು.

(7) ರಾಜ್ಯ ಸರ್ಕಾರವು, ಅರಣ್ಯ ಹಕ್ಕುಗಳನ್ನು ಮಾನ್ಯ ಮಾಡುವ ಮತ್ತು ನಿಹಿತಗೊಳಿಸುವ ಪ್ರಕ್ರಿಯೆಯ ಉಸ್ತುವಾರಿ ನೋಡಿಕೊಳ್ಳಲು ಮತ್ತು ನೋಡಲ್ ಏಜೆನ್ಸಿಗೆ ಆ ಏಜೆನ್ಸಿಯು ಕೋರಬಹುದಾದಂಥ ವಿವರಪಟ್ಟಿಕೆಗಳು ಮತ್ತು ವರದಿಗಳನ್ನು ಸಲ್ಲಿಸಲು ಒಂದು ರಾಜ್ಯಮಟ್ಟದ ಉಸ್ತುವಾರಿ ಸಮಿತಿಯನ್ನು ರಚಿಸತಕ್ಕದ್ದು.

(8) ಉಪ–ವಿಭಾಗ ಮಟ್ಟದ ಸಮಿತಿ, ಜಿಲ್ಲಾಮಟ್ಟದ ಸಮಿತಿ ಮತ್ತು ರಾಜ್ಯಮಟ್ಟದ ಉಸ್ತುವಾರಿ ಸಮಿತಿಗಳು, ನಿಯಮಿಸಬಹುದಾದಂಥ ರಾಜ್ಯ ಸರ್ಕಾರದ ಸೂಕ್ತ ಶ್ರೇಣಿಯ ಕಂದಾಯ, ಅರಣ್ಯ ಮತ್ತು ಬುಡಕಟ್ಟು ವ್ಯವಹಾರಗಳ ಇಲಾಖೆಗಳ ಅಧಿಕಾರಿಗಳನ್ನು ಒಳಗೊಂಡಿತರತಕ್ಕದ್ದು.

(9) ಉಪ–ವಿಭಾಗ ಮಟ್ಟದ ಸಮಿತಿ, ಜಿಲ್ಲಾಮಟ್ಟದ ಸಮಿತಿ ಮತ್ತು ರಾಜ್ಯಮಟ್ಟದ ಉಸ್ತುವಾರಿ ಸಮಿತಿಗಳ ರಚನೆ ಮತ್ತು ಪ್ರಕಾರ್ಯಗಳು ಮತ್ತು ಅವುಗಳ ಪ್ರಕಾರ್ಯಗಳನ್ನು ನಿರ್ವಹಿಸುವಲ್ಲಿ ಅವುಗಳು ಅನುಸರಿಸಬೇಕಾದ ಪ್ರಕ್ರಿಯೆಯು ಹಾಗೆ ನಿಯಮಿಸಬಹುದಾದಂತೆ ಇರತಕ್ಕದ್ದು.

## ಅಧ್ಯಾಯ – V

## ಅಪರಾಧಗಳು ಮತ್ತು ದಂಡನೆಗಳು

7. **ದಂಡನೆಗಳು:–** ಈ ಅಧಿನಿಯಮದ ಮೇರೆಗೆ ಅಥವಾ ಮೂಲಕ ಪ್ರದತ್ತವಾದ ಯಾವುದೇ ಅರಣ್ಯ ಹಕ್ಕನ್ನು ಹೊಂದಿರುವ ಯಾರೇ ಹಕ್ಕುದಾರನು ಅಥವಾ ಯಾರೇ ಇತರ ವ್ಯಕ್ತಿಯು,–

(i) ಈ ಅಧಿನಿಯಮದ ಯಾವುದೇ ಉಪಬಂಧಗಳನ್ನು ಉಲ್ಲಂಘಿಸಿದರೆ ಅಥವಾ ಉಲ್ಲಂಘಿಸಲು ದುಷ್ಪ್ರೇರಿಸಿದರೆ; ಅಥವಾ

(ii) ಈ ಅಧಿನಿಯಮದ ಮೇರೆಗೆ ನಿಹಿತವಾದ ಅಥವಾ ಮಾನ್ಯ ಮಾಡಿದ ಅರಣ್ಯ ಹಕ್ಕಿನ ಯಾವುವೇ ಷರತ್ತುಗಳನ್ನು ಉಲ್ಲಂಘನೆ ಮಾಡಿದರೆ; ಅಥವಾ

(iii) ಅರಣ್ಯ ಅಥವಾ ಅರಣ್ಯ ಉತ್ಪನ್ನವನ್ನು ಸಮರ್ಥಿಸಿಕೊಳ್ಳಲು ಆಗದಿರುವುದಕ್ಕೆ ಬಳಸಿಕೊಂಡರೆ;

(iv) ಯಾವುದೇ ವನ್ಯಪ್ರಾಣಿಯನ್ನು ಕೊಂದರೆ ಅಥವಾ ಅರಣ್ಯಗಳನ್ನು ಅಥವಾ ಜೈವಿಕ ವೈವಿಧ್ಯತೆಯ ಯಾವುದೇ ಇತರ ಸ್ವರೂಪವನ್ನು ಹಾಳು ಮಾಡಿದರೆ; ಅಥವಾ

(v) ಯಾವುದೇ ವಾಣಿಜ್ಯ ಉದ್ದೇಶಕ್ಕಾಗಿ ಮರಗಳನ್ನು ಕಡಿದರೆ,

– ಅವನು ಈ ಅಧಿನಿಯಮದ ವಿರುದ್ಧದ ಒಂದು ಅಪರಾಧದ ತಪ್ಪಿತಸ್ಥನಾಗತಕ್ಕದ್ದು ಮತ್ತು ಒಂದು ಸಾವಿರ ರೂಪಾಯಿಗಳಿಗೆ ವಿಸ್ತರಿಸಬಹುದಾದ ಜುಲ್ಮಾನೆಯಿಂದ ದಂಡಿತನಾಗತಕ್ಕದ್ದು ಮತ್ತು ಅಪರಾಧವನ್ನು ಒಂದಕ್ಕಿಂತ ಹೆಚ್ಚು ಸಲ ಮಾಡಿದ ಸಂದರ್ಭದಲ್ಲಿ, ಎರಡನೆಯ ಬಾರಿ ಅಥವಾ ತದನಂತರದಲ್ಲಿ ಅಪರಾಧವನ್ನು ಮಾಡಿದ ವ್ಯಕ್ತಿಯ ಅರಣ್ಯ ಹಕ್ಕುಗಳನ್ನು ಗ್ರಾಮ ಸಭೆಯ ಶಿಫಾರಸ್ಸಿನ ಮೇಲೆ, ಜಿಲ್ಲಾಮಟ್ಟದ ಸಮಿತಿಯು ತೀರ್ಮಾನಿಸಬಹುದಾದಂಥ ಅವಧಿಗೆ ಅಮಾನ್ಯಗೊಳಿಸತಕ್ಕದ್ದು:

ಪರಂತು, ಈ ಪ್ರಕರಣದ ಮೇರೆಗೆ ವಿಧಿಸಲಾಗುವ ದಂಡಗಳು, ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಇತರ ಕಾನೂನಿನ ಮೇರೆಗೆ ವಿಧಿಸಲಾದ ಯಾವುದೇ ದಂಡಕ್ಕೆ ಸೇರ್ಪಡೆಯಾಗತಕ್ಕದ್ದು ಮತ್ತು ಅದನ್ನು ಅಲ್ಪೀಕರಿಸತಕ್ಕದ್ದಲ್ಲ.

8. **ಈ ಅಧಿನಿಯಮದ ಮೇರೆಗಿನ ಪ್ರಾಧಿಕಾರಗಳು ಮತ್ತು ಸಮಿತಿಗಳ ಸದಸ್ಯರು ಅಥವಾ ಅಧಿಕಾರಿಗಳು ಮಾಡಿದ ಅಪರಾಧಗಳು:–** ಯಾವುದೇ ಪ್ರಾಧಿಕಾರ ಅಥವಾ ಸಮಿತಿ ಅಥವಾ ಅಂಥ ಪ್ರಾಧಿಕಾರ ಅಥವಾ ಸಮಿತಿಯ ಅಧಿಕಾರಿ ಅಥವಾ ಸದಸ್ಯನು ಅರಣ್ಯ ಹಕ್ಕುಗಳ ಮನ್ನಣೆಗೆ ಸಂಬಂಧಿಸಿದಂತೆ ಈ ಅಧಿನಿಯಮದ ಅಥವಾ ಅದರ ಮೇರೆಗೆ ರಚಿಸಿದ ಯಾವುದೇ ನಿಯಮದ ಯಾವುದೇ ಉಪಬಂಧವನ್ನು ಉಲ್ಲಂಘಿಸಿದಲ್ಲಿ, ಅದು ಅಥವಾ ಅವರು ಈ ಅಧಿನಿಯಮದ ಮೇರೆಗೆ ಅಪರಾಧದ ತಪ್ಪಿತಸ್ಥರೆಂದು ಭಾವಿಸತಕ್ಕದ್ದು ಮತ್ತು ಆ ವಿರುದ್ಧದ ವ್ಯವಹರಣೆಗೆ ಗುರಿಯಾಗತಕ್ಕದ್ದು ಮತ್ತು ಒಂದು ಸಾವಿರ ರೂಪಾಯಿಗಳಿಗೆ ವಿಸ್ತರಿಸಬಹುದಾದ ಜುಲ್ಮಾನೆಯಿಂದ ದಂಡಿತರಾಗತಕ್ಕದ್ದು:

ಪರಂತು, ಈ ಪ್ರಕರಣದಲ್ಲಿ ಉಲ್ಲೇಖಿಸಿದ ಪ್ರಾಧಿಕಾರ ಅಥವಾ ಸಮಿತಿಯ ಯಾರೇ ಸದಸ್ಯ ಅಥವಾ ಇಲಾಖಾ ಮುಖ್ಯಸ್ಥ ಅಥವಾ ಯಾರೇ ವ್ಯಕ್ತಿಯು ಆ ಅಪರಾಧವು ತನಗೆ ತಿಳಿಯದೆಯೇ ನಡೆಯಿತೆಂದು ಅಥವಾ ಅಂಥ ಅಪರಾಧ ನಡೆಯುವುದನ್ನು ತಡೆಗಟ್ಟಲು ಸೂಕ್ತವಾದ ಎಲ್ಲಾ ಜಾಗರೂಕತೆಯನ್ನು ತಾನು ವಹಿಸಿದ್ದೆನೆಂದು ಅವನು ರುಜುವಾತುಪಡಿಸಿದರೆ ಅವನನ್ನು ಈ ಉಪಪ್ರಕರಣದಲ್ಲಿರುವುದು ಯಾವುದೂ ದಂಡನೆಗೆ ಗುರಿಪಡಿಸತಕ್ಕದ್ದಲ್ಲ.

9. **ಅಪರಾಧಗಳ ಸಂಜ್ಞೇಯತೆ:–** ಯಾವುದೇ ನ್ಯಾಯಾಲಯವು, 8ನೇ ಪ್ರಕರಣದ ಅಡಿಯಲ್ಲಿನ ಯಾವುದೇ ಅಪರಾಧದ ಸಂಜ್ಞೇಯತೆಯನ್ನು, ಗ್ರಾಮ ಸಭೆಯ ನಿರ್ಣಯಕ್ಕೆ ಸಂಬಂಧಪಟ್ಟ ವಿವರವಾಗಿದ್ದಲ್ಲಿ, ಯಾವುದೇ ಅರಣ್ಯವಾಸಿ ಅನುಸೂಚಿತ ಬುಡಕಟ್ಟಿನ ಅಥವಾ ಯಾವುದೇ ಉನ್ನತ ಪ್ರಾಧಿಕಾರದ ವಿರುದ್ಧ ಗ್ರಾಮ ಸಭೆಯು ನಿರ್ಣಯದ ಮೂಲಕ ಅರವತ್ತು ದಿನಗಳಿಗೆ ಕಡಿಮೆಯಿಲ್ಲದಂತೆ ರಾಜ್ಯಮಟ್ಟದ ಉಸ್ತುವಾರಿ ಸಮಿತಿಗೆ ನೋಟೀಸನ್ನು ನೀಡಿದ ಹೊರತು ಮತ್ತು ರಾಜ್ಯಮಟ್ಟದ ಉಸ್ತುವಾರಿ ಸಮಿತಿಯು ಅಂಥ ಪ್ರಾಧಿಕಾರದ ವಿರುದ್ಧ ಕ್ರಮ ಜರುಗಿಸದ ಹೊರತು, ತೆಗೆದುಕೊಳ್ಳತಕ್ಕದ್ದಲ್ಲ.

## ಅಧ್ಯಾಯ – VI

## ಸಂಕೀರ್ಣ

10. **ಪ್ರಾಧಿಕಾರಿಗಳ ಸದಸ್ಯರು, ಇತ್ಯಾದಿ ಲೋಕ ನೌಕರರಾಗಿರುವುದು:–** ಈ ಅಧಿನಿಯಮದ ಮೇರೆಗೆ ಮತ್ತು ಮೂಲಕ ಪ್ರದತ್ತವಾದ ಯಾವುವೇ ಅಧಿಕಾರಗಳನ್ನು ಚಲಾಯಿಸುವ IVನೇ ಅಧ್ಯಾಯದಲ್ಲಿ ಉಲ್ಲೇಖಿಸಿದ ಪ್ರಾಧಿಕಾರಗಳ

ಪ್ರತಿಯೊಬ್ಬ ಸದಸ್ಯ ಹಾಗೂ ಪ್ರತಿಯೊಬ್ಬ ಇತರ ಅಧಿಕಾರಿಯು ಭಾರತ ದಂಡ ಸಂಹಿತೆಯ (1860ರ 45) 21ನೇ ಪ್ರಕರಣದ ಅರ್ಥ ವ್ಯಾಪ್ತಿಯೊಳಗೆ ಲೋಕ ನೌಕರನೆಂದು ಭಾವಿಸತಕ್ಕದ್ದು.

**11. ಸದ್ಭಾವನೆಯಲ್ಲಿ ಕೈಗೊಂಡ ಕ್ರಮದ ರಕ್ಷಣೆ:–** (1) ಈ ಅಧಿನಿಯಮದ ಮೇರೆಗೆ ಸದ್ಭಾವನೆಯಿಂದ ಮಾಡಿದ ಅಥವಾ ಮಾಡಲು ಉದ್ದೇಶಿಸಿದ ಯಾವುದೇ ಕ್ರಮದ ಬಗ್ಗೆ ಕೇಂದ್ರ ಸರ್ಕಾರದ ಅಥವಾ ರಾಜ್ಯ ಸರ್ಕಾರದ ಯಾರೇ ಅಧಿಕಾರಿಯ ಅಥವಾ ಇತರ ನೌಕರನ ವಿರುದ್ಧ ಯಾವುದೇ ದಾವೆ, ಪ್ರಾಸಿಕ್ಯೂಷನ್ ಅಥವಾ ಇತರ ಕಾನೂನು ವ್ಯವಹರಣೆಯನ್ನು ಹೂಡತಕ್ಕದ್ದಲ್ಲ.

(2) ಈ ಅಧಿನಿಯಮದ ಮೇರೆಗೆ ಸದ್ಭಾವನೆಯಿಂದ ಮಾಡಿದ ಅಥವಾ ಮಾಡಲು ಉದ್ದೇಶಿಸಿದ ಯಾವುದೇ ಕ್ರಮದಿಂದ ಉಂಟಾದ ಅಥವಾ ಉಂಟಾಗುವ ಸಂಭವವಿರುವ ಯಾವುದೇ ಹಾನಿಗಾಗಿ ಕೇಂದ್ರ ಸರ್ಕಾರ ಅಥವಾ ರಾಜ್ಯ ಸರ್ಕಾರ ಅಥವಾ ಯಾವುದೇ ಅದರ ಅಧಿಕಾರಿಗಳು ಅಥವಾ ಇತರ ನೌಕರರ ವಿರುದ್ಧ ಯಾವುದೇ ದಾವೆ ಅಥವಾ ಇತರ ಕಾನೂನು ವ್ಯವಹರಣೆಯನ್ನು ಹೂಡತಕ್ಕದ್ದಲ್ಲ.

(3) ಈ ಅಧಿನಿಯಮದ ಮೇರೆಗೆ ಸದ್ಭಾವನೆಯಿಂದ ಮಾಡಿದ ಅಥವಾ ಮಾಡಲು ಉದ್ದೇಶಿಸಿದ ಯಾವುದೇ ಕ್ರಮದ ಬಗ್ಗೆ ಅಧ್ಯಕ್ಷ, ಸದಸ್ಯರು, ಸದಸ್ಯ–ಕಾರ್ಯದರ್ಶಿ, ಅಧಿಕಾರಿಗಳು ಮತ್ತು ಇತರ ನೌಕರರನ್ನು ಒಳಗೊಂಡಂತೆ, IVನೇ ಅಧ್ಯಾಯದಲ್ಲಿ ಉಲ್ಲೇಖಿಸಿದ ಯಾವುದೇ ಪ್ರಾಧಿಕಾರದ ವಿರುದ್ಧ ಯಾವುದೇ ದಾವೆ ಅಥವಾ ಇತರ ಕಾನೂನು ವ್ಯವಹರಣೆಯನ್ನು ಹೂಡತಕ್ಕದ್ದಲ್ಲ.

**12. ನೋಡಲ್ ಏಜೆನ್ಸಿ:–** ಬುಡಕಟ್ಟು ವ್ಯವಹಾರಗಳನ್ನು ನಿರ್ವಹಿಸುತ್ತಿರುವ ಕೇಂದ್ರ ಸರ್ಕಾರದ ಮಂತ್ರಾಲಯ ಅಥವಾ ಈ ಬಗ್ಗೆ ಕೇಂದ್ರ ಸರ್ಕಾರ ಅಧಿಕೃತಗೊಳಿಸಿದ ಯಾರೇ ಅಧಿಕಾರಿ ಅಥವಾ ಪ್ರಾಧಿಕಾರಿಯು ಈ ಅಧಿನಿಯಮದ ಉಪಬಂಧಗಳ ಅನುಷ್ಠಾನಕ್ಕಾಗಿ ನೋಡಲ್ ಏಜೆನ್ಸಿಯಾಗಿರತಕ್ಕದ್ದು.

**13. ನಿರ್ದೇಶನಗಳನ್ನು ಹೊರಡಿಸುವ ಕೇಂದ್ರ ಸರ್ಕಾರದ ಅಧಿಕಾರ:–** ಈ ಅಧಿನಿಯಮದ ಮೂಲಕ ಅಥವಾ ಮೇರೆಗೆ ಅದರ ಕರ್ತವ್ಯಗಳ ನಿರ್ವಹಣೆಯಲ್ಲಿ ಮತ್ತು ಅಧಿಕಾರಗಳ ಚಲಾವಣೆಯಲ್ಲಿ IVನೇ ಅಧ್ಯಾಯದಲ್ಲಿ ಉಲ್ಲೇಖಿಸಲಾದ ಪ್ರತಿಯೊಬ್ಬ ಪ್ರಾಧಿಕಾರಿಯು ಕೇಂದ್ರ ಸರ್ಕಾರವು ಕಾಲ ಕಾಲಕ್ಕೆ ಲಿಖಿತದಲ್ಲಿ ನೀಡಬಹುದಾದಂಥ ಸಾಮಾನ್ಯ ಅಥವಾ ವಿಶೇಷ ನಿರ್ದೇಶನಗಳಿಗೆ ಒಳಪಟ್ಟಿರತಕ್ಕದ್ದು.

**14. ಅಧಿನಿಯಮವು ಯಾವುದೇ ಇತರ ಕಾನೂನನ್ನು ಅಲ್ಪೀಕರಿಸತಕ್ಕದ್ದಲ್ಲ:–** ಈ ಅಧಿನಿಯಮದಲ್ಲಿ ಉಪಬಂಧಿಸಲಾದುದನ್ನುಳಿದು, ಈ ಅಧಿನಿಯಮದ ಉಪಬಂಧಗಳು ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಇತರ ಕಾನೂನಿನ ಉಪಬಂಧಗಳ ಜೊತೆಗಿರತಕ್ಕದ್ದು ಮತ್ತು ಅವುಗಳನ್ನು ಅಲ್ಪೀಕರಿಸತಕ್ಕದ್ದಲ್ಲ.

**15. ನಿಯಮಗಳ ರಚನಾಧಿಕಾರ:–** (1) ಕೇಂದ್ರ ಸರ್ಕಾರವು, ಅಧಿಸೂಚನೆ ಮೂಲಕ ಈ ಅಧಿನಿಯಮದ ಉಪಬಂಧಗಳನ್ನು ಕಾರ್ಯಗತಗೊಳಿಸುವುದಕ್ಕಾಗಿ ನಿಯಮಗಳನ್ನು ರಚಿಸಬಹುದು.

(2) ವಿಶೇಷವಾಗಿ ಮತ್ತು ಹಿಂದೆ ಹೇಳಿದ ಅಧಿಕಾರಿಗಳ ಸಾಮಾನ್ಯ ಅನ್ವಯಕ್ಕೆ ಬಾಧಕವಾಗದಂತೆ, ಅಂಥ ನಿಯಮಗಳನ್ನು ಈ ಕೆಳಕಂಡ ಎಲ್ಲಾ ಅಥವಾ ಅವುಗಳ ಪೈಕಿ ಯಾವುವೇ ವಿಷಯಗಳಿಗಾಗಿ ಉಪಬಂಧಿಸಹುದು, ಎಂದರೆ:–

(ಎ) 4ನೇ ಪ್ರಕರಣದ (1)ನೇ ಉಪಪ್ರಕರಣದ ಮೇರೆಗೆ ಅರಣ್ಯ ಹಕ್ಕುಗಳನ್ನು ಚಲಾಯಿಸಬಹುದಾದ ರೀತಿ;

(ಬಿ) 4ನೇ ಪ್ರಕರಣದ (4)ನೇ ಉಪಪ್ರಕರಣದ ಮೇರೆಗೆ ಅರಣ್ಯ ಹಕ್ಕುಗಳ ಮಾನ್ಯತೆ ಮತ್ತು ಪರಿಶೀಲನೆಗಾಗಿ ಪ್ರಕ್ರಿಯೆ ಮತ್ತು ರೀತಿ;

(ಸಿ) 6ನೇ ಪ್ರಕರಣದ (1)ನೇ ಉಪಪ್ರಕರಣದ ಮೇರೆಗೆ ಅರಣ್ಯ ಹಕ್ಕುಗಳ ಚಲಾವಣೆಗಾಗಿ ಕ್ಲೇಮುಗಳನ್ನು ಸ್ವೀಕರಿಸುವುದು, ಕ್ರೋಡೀಕರಿಸುವುದು ಮತ್ತು ಅವುಗಳನ್ನು ಪರಿಶೀಲಿಸುವುದು ಮತ್ತು ಶಿಫಾರಸು ಮಾಡಿದ ಪ್ರತಿ ಕ್ಲೇಮಿನ ಪ್ರದೇಶವನ್ನು ನಿರೂಪಿಸುವ ನಕ್ಷೆಯನ್ನು ಸಿದ್ಧಪಡಿಸುವ ಪ್ರಕ್ರಿಯೆ ಮತ್ತು ಆ ಪ್ರರಕಣದ (2)ನೇ ಉಪಪ್ರಕರಣದ ಮೇರೆಗೆ ಉಪ–ವಿಭಾಗೀಯ ಸಮಿತಿಗೆ ಅರ್ಜಿ ಸಲ್ಲಿಸುವ ರೀತಿ;

(ಡಿ) 6ನೇ ಪ್ರಕರಣದ (8)ನೇ ಉಪಪ್ರಕರಣದ ಮೇರೆಗೆ ಉಪ–ವಿಭಾಗ ಮಟ್ಟದ ಸಮಿತಿ, ಜಿಲ್ಲಾಮಟ್ಟದ ಸಮಿತಿ ಹಾಗೂ ರಾಜ್ಯಮಟ್ಟದ ಮೇಲ್ವಿಚಾರಣಾ ಸಮಿತಿಯ ಸದಸ್ಯರಾಗಿ ನೇಮಕ ಮಾಡಲು ರಾಜ್ಯ ಸರ್ಕಾರದ ಕಂದಾಯ, ಅರಣ್ಯ, ಮತ್ತು ಬುಡಕಟ್ಟು ವ್ಯವಹಾರಗಳ ಇಲಾಖೆಯ ಅಧಿಕಾರಿಗಳ ಮಟ್ಟ;

(ಇ) ಉಪ–ವಿಭಾಗ ಮಟ್ಟದ ಸಮಿತಿ, ಜಿಲ್ಲಾಮಟ್ಟದ ಸಮಿತಿ ಮತ್ತು ರಾಜ್ಯಮಟ್ಟದ ಮೇಲ್ವಿಚಾರಣಾ ಸಮಿತಿಯ ರಚನೆ ಮತ್ತು ಪ್ರಕಾರ್ಯಗಳು ಮತ್ತು 6ನೇ ಪ್ರಕರಣದ (9)ನೇ ಉಪಪ್ರಕರಣದ ಮೇರೆಗೆ ಅವುಗಳು ತಮ್ಮ ಪ್ರಕಾರ್ಯಗಳ ನಿರ್ವಹಣೆಯಲ್ಲಿ ಅನುಸರಿಸಬೇಕಾದ ಪ್ರಕ್ರಿಯೆ;

(ಎಫ್) ಅಗತ್ಯಪಡಿಸಬೇಕಾದ ಅಥವಾ ನಿಯಮಿಸಬಹುದಾದ ಯಾವುದೇ ಇತರ ವಿಷಯ;

(3) ಈ ಅಧಿನಿಯಮದ ಮೇರೆಗೆ ರಚಿಸಿದ ಪ್ರತಿಯೊಂದು ನಿಯಮವನ್ನು ಅದನ್ನು ರಚಿಸಿದ ತರುವಾಯ ಆದಷ್ಟು ಬೇಗನೆ, ಸಂಸತ್ತಿನ ಪ್ರತಿಯೊಂದು ಸದನದ ಮುಂದೆ, ಅದು ಅಧಿವೇಶನದಲ್ಲಿರುವಾಗ ಒಂದು ಅಧಿವೇಶನದಲ್ಲಿ ಅಥವಾ ಎರಡು ಅಥವಾ ಹೆಚ್ಚು ಅನುಕ್ರಮ ಅಧಿವೇಶನಗಳಲ್ಲಿ ಅಡಕವಾಗಬಹುದಾದ ಒಟ್ಟು ಮೂವತ್ತು ದಿನಗಳ ಅವಧಿಯವರೆಗೆ ಇಡತಕ್ಕದ್ದು ಮತ್ತು ಮೇಲೆ ಹೇಳಿದ ಅಧಿವೇಶನ ಅಥವಾ ಅನುಕ್ರಮ ಅಧಿವೇಶನದ ನಿಕಟೋತ್ತರ ಅಧಿವೇಶನದ ಮುಕ್ತಾಯಕ್ಕೆ ಮುಂಚೆ ಆ ನಿಯಮದಲ್ಲಿ ಯಾವುದೇ ಮಾರ್ಪಾಟನ್ನು ಮಾಡಬೇಕೆಂದು ಎರಡೂ ಸದನಗಳು ಒಪ್ಪಿದರೆ ಅಥವಾ ಆ ನಿಯಮವನ್ನು

ರಚಿಸಕೂಡದೆಂದು ಎರಡೂ ಸದನಗಳು ಒಪ್ಪಿದರೆ, ಆ ತರುವಾಯ ಆ ನಿಯಮವು ಸಂದರ್ಭಾನುಸಾರ, ಹಾಗೆ ಮಾರ್ಪಾಟಾದ ರೂಪದಲ್ಲಿ ಮಾತ್ರ ಪರಿಣಾಮಕಾರಿಯಾಗತಕ್ಕದ್ದು ಅಥವಾ ಪರಿಣಾಮಕಾರಿಯಾಗತಕ್ಕದ್ದಲ್ಲ; ಆದಾಗ್ಯೂ, ಅಂಥ ಯಾವುದೇ ಮಾರ್ಪಾಟು ಅಥವಾ ರದ್ದತಿಯು ಆ ನಿಯಮದ ಅಡಿಯಲ್ಲಿ ಹಿಂದೆ ಮಾಡಲಾದ ಯಾವುದೇ ಕಾರ್ಯದ ಕಾನೂನು ಮಾನ್ಯತೆಗೆ ಬಾಧಕವನ್ನುಂಟು ಮಾಡತಕ್ಕದ್ದಲ್ಲ.

**ಉದ್ದೇಶಗಳು ಮತ್ತು ಕಾರಣಗಳ ವಿವರಣೆ**

ಅರಣ್ಯವಾಸಿ ಬುಡಕಟ್ಟು ಜನಾಂಗ ಮತ್ತು ಅರಣ್ಯಗಳು ಈ ಎರಡೂ ಅವಿಭಾಜ್ಯ ಅಂಗ. ಒಂದು ಇನ್ನೊಂದನ್ನು ಬಿಟ್ಟು ಉಳಿಯಲಾರದು. ಅರಣ್ಯವಾಸಿ ಬುಡಕಟ್ಟು ಸಮುದಾಯಗಳಿಂದ ಪರಿಸರ ಸಂಪನ್ಮೂಲಗಳ ಸಂರಕ್ಷಣೆಯಾಗುತ್ತಿದೆಯೆಂಬುದನ್ನು ಪ್ರಾಚೀನ ಹಸ್ತಪ್ರತಿಗಳಲ್ಲಿ ಮತ್ತು ಶಾಸನಗಳಲ್ಲಿ ಉಲ್ಲೇಖಿಸಲಾಗಿದೆ. ವಸಾಹತು ಅಧಿಕಾರವು ಪ್ರಾಯಶಃ ತನ್ನ ಅತಿಯಾದ ಆರ್ಥಿಕ ಲಾಭದಾಸೆಯಿಂದಾಗಿ ಮತ್ತು ಆ ಕಾಲದಲ್ಲಿ ಪ್ರಚಲಿತವಾಗಿದ್ದ ಸಮಂಜಸ ಕಾರಣಗಳಿಗಾಗಿ ಹೇಗೋ ಈ ವಾಸ್ತವಾಂಶವನ್ನು ನಿರ್ಲಕ್ಷಿಸಿತು. ಸ್ವತಂತ್ರದ ನಂತರ, ನೈಸರ್ಗಿಕ ಸಂಪನ್ಮೂಲಗಳನ್ನು ಸಂರಕ್ಷಿಸುವ ನಮ್ಮ ಉತ್ಸಾಹದಲ್ಲಿ ನಮ್ಮ ಬುಡಕಟ್ಟು ಜನಾಂಗಗಳ ಜೀವನ ಕ್ರಮದ ಬಿಡಿಸಲಾಗದ ಗುಣವಿಶೇಷವೇ ಈ ಸಂರಕ್ಷಣೆ ಎಂಬುದನ್ನು ನಿರೂಪಿಸಿರುವ ನಮ್ಮ ರಾಷ್ಟ್ರದ ಸಂಪದ್ಭರಿತ ಪರಂಪರೆಯಿಂದ ಕಲಿಯುವುದಕ್ಕಿಂತಲು ಹೆಚ್ಚಾಗಿ ನಾವು ವಸಾಹತು ಶಾಸನದೊಂದಿಗೆ ಮುಂದುವರೆದು ಅಂತರ್‌ರಾಷ್ಟ್ರೀಯವಾಗಿ ಅಂಗೀಕೃತವಾದ ಅಭಿಪ್ರಾಯಗಳನ್ನು ಅಳವಡಿಸಿಕೊಂಡೆವು. ಅರಣ್ಯ ಪ್ರದೇಶಗಳ ನಿರ್ಮಣಕ್ಕಾಗಿ ಅರಣ್ಯ ಮತ್ತು ವನ್ಯಜೀವಿಗಳ ಪ್ರದೇಶಗಳನ್ನು ಸೃಷ್ಟಿಸುವ ಮೀಸಲು ಪ್ರಕ್ರಿಯೆಯು ಮೂಲತಃವಾಗಿ ಬುಡಕಟ್ಟು ಸಮುದಾಯ ವಾಸಿಸುವ ಪ್ರದೇಶಗಳಲ್ಲಿನ ಶಾಸನಾತ್ಮಕ ಕಾರ್ಯಚೌಕಟ್ಟಿನಿಂದ ಅವರ ಪ್ರಾಮಾಣಿಕ ಹಿತಾಸಕ್ತಿಗಳನ್ನು ಹೇಗೋ ಕಡೆಗಣಿಸಿತು. ಬುಡಕಟ್ಟು ಜನಾಂಗದ ಸರಳತೆ ಮತ್ತು ಆಧುನಿಕ ನಿಯಂತ್ರಣಗಳ ಕಾರ್ಯಚೌಕಟ್ಟುಗಳ ಬಗ್ಗೆ ಅವರಿಗಿರುವ ಸಾಮಾನ್ಯ ಅಜ್ಞಾನ ಅವರು ವಾಸಿಸುತ್ತಿರುವ ಮತ್ತು ಅವಲಂಬಿತರಾಗಿರುವ ಪ್ರದೇಶಗಳ ಸಂಪನ್ಮೂಲಗಳ ಬಗ್ಗೆ ಅವರ ನೈಜವಾದ ಹಕ್ಕುಗಳನ್ನು ಪ್ರತಿಪಾದಿಸುವುದಕ್ಕೆ ಅಡ್ಡಿಯುಂಟುಮಾಡಿತು. ಆಧುನಿಕ ಸಂರಕ್ಷಣಾ ಕ್ರಮಗಳೂ ಸಹ ಅವರನ್ನು ಒಂದುಗೂಡಿಸುವುದಕ್ಕಿಂತ ಹೆಚ್ಚಾಗಿ ಹೊರಗಿಡುವುದನ್ನು ಪ್ರತಿಪಾದಿಸುತ್ತಿವೆ. ಇತ್ತೀಚೆಗಷ್ಟೇ ಅರಣ್ಯ ನಿರ್ವಹಣಾ ಅಧಿಕಾರಿಗಳು ಅರಣ್ಯವಾಸಿಗಳ ಅಧಿಭೋಗ ಮತ್ತು ಇತರ ಹಕ್ಕುಗಳನ್ನು ಮಾನ್ಯ ಮಾಡುವ ಕಾರ್ಯವನ್ನು ಪ್ರಾರಂಭಿಸಿವೆ ಮತ್ತು ಮೂಲತಃ ಅರಣ್ಯ ಸಂಪನ್ಮೂಲವನ್ನವಲಂಬಿಸಿರುವ ಬುಡಕಟ್ಟು ಸಮುದಾಯಗಳನ್ನು ಅದರ ಉದ್ದೇಶಿತ ನಿರ್ವಹಣಾ ಪ್ರಕ್ರಿಯೆಗಳಲ್ಲಿ ಸೇರಿಸದೇ ಅನ್ಯಮಾರ್ಗವಿಲ್ಲವೆಂದು ಅವರ ಕಾರ್ಯನೀತಿ ಪ್ರಕ್ರಿಯೆಗಳಲ್ಲಿ ಮನಗಂಡಿವೆ. ಅರಣ್ಯಗಳ ಸಂರಕ್ಷಣೆಯಲ್ಲಿ ಹಾಗೂ ಪುನರುಜ್ಜೀವನ ಕ್ರಮಗಳಲ್ಲಿ ಸಮುದಾಯಗಳು ಭಾಗವಹಿಸಿದರೆ ಮಾತ್ರ ಅರಣ್ಯಗಳು ಉಳಿಯಲು ಒಂದು ಉತ್ತಮ ಅವಕಾಶ ಎಂಬ ವಾಸ್ತವಾಂಶವನ್ನು ಮಾನ್ಯ ಮಾಡಲಾಗಿದೆ. ತಲೆಮಾರುಗಳಿಂದ ಅವರು ಬಾಳಿ ಬದುಕಿದ ಈ ಜಮೀನುಗಳ ಹಿಡುವಳಿಯ ಅಭದ್ರತೆ ಹಾಗೂ ಅಲ್ಲಿಂದ ಅವರನ್ನು ಒಕ್ಕಲೆಬ್ಬಿಸುವ ಭಯವೇ ಪ್ರಾಯಶಃ ಬುಡಕಟ್ಟು ಪಂಗಡಗಳು, ತಾವು ಮಾನಸಿಕವಾಗಿ ಹಾಗೂ ದೈಹಿಕವಾಗಿ ಅರಣ್ಯಗಳಿಂದ ಮತ್ತು ಅರಣ್ಯ ಜಮೀನುಗಳಿಂದ ದೂರವಾಗುತ್ತಿದ್ದೇವೆ ಎಂದು ಭಾವಿಸಲು ಮುಖ್ಯ ಕಾರಣವಾಗಿದೆ. ಅರಣ್ಯಗಳು ಅನಪೇಕ್ಷಿತ ಶಕ್ತಿಗಳ ಸ್ವರ್ಗದಾಣಗಳಾಗಿ ಪರಿಣಮಿಸುವುದನ್ನು ತಡೆಯುವಲ್ಲಿ ವಿಳಂಬವಾಗುವ ಮೊದಲೇ ಈ ಐತಿಹಾಸಿಕ ಅನ್ಯಾಯವನ್ನು ಈಗ ಸರಿಪಡಿಸುವುದು ಅಗತ್ಯವಾಗಿದೆ.

2. ಆದುದರಿಂದ, ಅರಣ್ಯವಾಸಿ ಅನುಸೂಚಿತ ಬುಡಕಟ್ಟುಗಳಿಗೆ ಅರಣ್ಯ ಹಕ್ಕುಗಳನ್ನು ಮಾನ್ಯ ಮಾಡುವುದಕ್ಕಾಗಿ ಮತ್ತು ನಿಹಿತಗೊಳಿಸುವುದಕ್ಕಾಗಿ ಪ್ರಕ್ರಿಯೆಯನ್ನು ನಿರೂಪಿಸುವ ಕಾನೂನನ್ನು ಅಧಿನಿಯಮಿತಗೊಳಿಸುವುದಕ್ಕೆ ಉದ್ದೇಶಿಸಲಾಗಿದೆ. ಅರಣ್ಯ ಹಕ್ಕುಗಳನ್ನು ಮಾನ್ಯ ಮಾಡುವ ಪ್ರಕ್ರಿಯೆಯ ಈ ವಿಧೇಯಕವು, ತಾರ್ಕಿಕವಾಗಿ ಒಂದು ಶ್ರೇಷ್ಠಮಟ್ಟದ್ದಾಗಿದೆ. ತಮ್ಮ ಉದರಪೋಷಣೆಗಾಗಿ ಅರಣ್ಯ ಜಮೀನು ಮತ್ತು ಉಪ–ಭೋಗಕ್ಕಾಗಿ ಅರಣ್ಯ ನಾಶಪಡಿಸದಂತೆ ಅರಣ್ಯ ಆಧಾರಿತ ಸಂಪನ್ಮೂಲಗಳ ಬಳಕೆಗಳು ಸೇರಿದಂತೆ ಎಲ್ಲಾ ರೀತಿಯ ಅರಣ್ಯ ಜಮೀನಗಳನ್ನು ಅರಣ್ಯವಾಸಿ ಅನುಸೂಚಿತ ಬುಡಕಟ್ಟುಗಳಿಗೆ ಅರಣ್ಯ ಹಕ್ಕುಗಳನ್ನು ಮಾನ್ಯ ಮಾಡುವುದೇ ಈ ವಿಧೇಯಕದ ಮೂಲ ಉದ್ದೇಶವಾಗಿದೆ.

**3. ಈ ವಿಧೇಯಕವು ಇತರ ವಿಷಯಗಳ ಜೊತೆಗೆ ಈ ಕೆಳಕಂಡ ವಿಷಯಗಳಿಗಾಗಿ ಉಪಬಂಧ ಕಲ್ಪಿಸುತ್ತದೆ, ಎಂದರೆ:–**

i. ಇದು ಬುಡಕಟ್ಟು ಸಮುದಾಯಗಳು ಪರಂಪರಾಗತವಾಗಿ ತೋರಿಸಿದ ಸಂಪದ್ಭರಿತ ಸಂರಕ್ಷಣೆಯ ವಿಶೇಷತೆಗಳನ್ನು ಬಲಪಡಿಸುವುದು ಮತ್ತು ಉಪಯೋಗಿಸಿಕೊಳ್ಳುವುದು ಮತ್ತು ಅಸಮರ್ಥನೀಯ ಅಥವಾ ನಾಶಕಾರಕ ಕ್ರಮಗಳ ವಿರುದ್ಧ ಎಚ್ಚರಿಕೆ ವಹಿಸುವುದು;

ii. ಇದು ಅರಣ್ಯದಲ್ಲಿ ವಾಸಿಸುವ ಅನುಸೂಚಿತ ಬುಡಕಟ್ಟುಗಳಲ್ಲಿ ಅರಣ್ಯ ಹಕ್ಕುಗಳ ಮಾನ್ಯತೆ ಹಾಗೂ ನಿಹಿತಗೊಳಿಸುವುದಕ್ಕಾಗಿ ಸರಳ ಪ್ರಕ್ರಿಯೆಯನ್ನು ನಿರೂಪಿಸುವುದು. ಹಾಗಿದ್ದಾಗ, ಅರಣ್ಯದಲ್ಲಿ ವಾಸಿಸುವ ಬುಡಕಟ್ಟು ಸಮುದಾಯಗಳಿಗೆ ನಿಹಿತವಾದ ಹಕ್ಕುಗಳನ್ನು ಕಾರ್ಯನಿರ್ವಾಹಕ ಯಂತ್ರದ ಔಪಚಾರಿಕ ದಾಖಲು ಪದ್ಧತಿಯಲ್ಲಿ ಸುಧಾರಕ ಕ್ರಮಗಳನ್ನು ದಾಖಲಿಸುವ ಮೂಲಕ ಕಾನೂನಾತ್ಮಕವಾಗಿ ಜಾರಿಮಾಡುವುದು;

iii. ಇದು ಅರಣ್ಯಗಳ ಯಾವುದೇ ಮುಂದುವರಿದ ಒತ್ತುವರಿಯನ್ನು ತಪ್ಪಿಸಲು ಸಾಕಷ್ಟು ಸುರಕ್ಷಾ ಕ್ರಮಗಳನ್ನು ಒದಗಿಸುವುದು ಮತ್ತು ಅರಣ್ಯ ಹಕ್ಕುಗಳನ್ನು ಮಾನ್ಯ ಮಾಡುವ ಹಾಗೂ ನಿಹಿತಗೊಳಿಸುವ ಪ್ರಕ್ರಿಯೆಯಲ್ಲಿ ಕೆಳಹಂತದಲ್ಲಿ ಪ್ರಜಾಸತ್ತಾತ್ಮಕ ಸಂಸ್ಥೆಗಳು ಭಾಗವಹಿಸುವಂತೆ ಕೋರುವುದು;

iv. ಇದು, ಅರಣ್ಯ ಹಕ್ಕುಗಳನ್ನು ಅವಲಂಬಿಸಿಯೇ ತಮ್ಮ ಜೀವನ ನಡೆಸುವ ಹಕ್ಕು ಹೊಂದಿದ, ಬಹುದಿನದ ಮತ್ತು ಅತ್ಯಂತ ನೈಜ ಅವಶ್ಯಕತೆಯಾದ ಸುಭದ್ರ ಹಾಗೂ ಪರಭಾರೆ ಮಾಡಲಾಗದ ಹಕ್ಕನ್ನು ನೀಡುವುದು ಮತ್ತು ಆ ಮೂಲಕ ಇಡೀ ಪರಿಸರ ವ್ಯವಸ್ಥೆಯೊಂದಿಗೆ ತಲತಲಾಂತರದಿಂದ ಸಹಬಾಳ್ವೆಯ ಸಂಬಂಧ ಹೊಂದಿದ ಅರಣ್ಯವಾಸಿ ಅನುಸೂಚಿತ ಬುಡಕಟ್ಟುಗಳಿಗೆ ಶಾಶ್ವತ ಬಾಧ್ಯತೆಯನ್ನು ನೀಡಿ ಸಮಗ್ರ ಸಂರಕ್ಷಣಾ ಕ್ರಮವನ್ನು ಬಲಪಡಿಸುವುದು.

4. ಮೇಲಿನ ಉದ್ದೇಶಗಳನ್ನು ಈಡೇರಿಸುವಂತೆ ಈ ವಿಧೇಯಕ ಕೋರಿದೆ.

ನವ ದೆಹಲಿ
5.12.2005 **(ಪಿ.ಆರ್. ಕಿಂಡಿಯ)**

**ಹಣಕಾಸು ವಿವರಣಾ ಪತ್ರ**

ವಿಧೇಯಕದ 2ನೇ ಖಂಡದ (ಎ) ಉಪಖಂಡವು, ಅರಣ್ಯ ಹಕ್ಕುಗಳಿಗೆ ಸಂಬಂಧಿಸಿದ ವಿವಾದಗಳೊಂದಿಗೆ ವ್ಯವಹರಿಸಲು ಸಕ್ಷಮ ಪ್ರಾಧಿಕಾರಿಯಾದ ಒಬ್ಬ ಅಧಿಕಾರಿ ಅಥವಾ ಪ್ರಾಧಿಕಾರಿಯ ನೇಮಕಾತಿಗೆ ಅವಕಾಶ ಕಲ್ಪಿಸುತ್ತದೆ. ವಿಧೇಯಕದ 6ನೇ ಖಂಡದ (3)ನೇ ಉಪಖಂಡವು ಇತರ ವಿಷಯಗಳ ಜೊತೆಗೆ ರಾಜ್ಯ ಸರ್ಕಾರದಿಂದ ಉಪ-ವಿಭಾಗ ಮಟ್ಟದ ಸಮಿತಿಯ ರಚನೆಗೆ ಅವಕಾಶ ಕಲ್ಪಿಸುತ್ತದೆ. 6ನೇ ಖಂಡದ (5)ನೇ ಉಪಖಂಡವು ರಾಜ್ಯ ಸರ್ಕಾರದಿಂದ ಜಿಲ್ಲಾಮಟ್ಟದ ಸಮಿತಿಯ ರಚನೆಗೆ ಅವಕಾಶ ಕಲ್ಪಿಸುತ್ತದೆ. 6ನೇ ಖಂಡದ (7)ನೇ ಉಪಖಂಡವು, ರಾಜ್ಯ ಸರ್ಕಾರದಿಂದ, ರಾಜ್ಯಮಟ್ಟದ ಮೇಲ್ವಿಚಾರಣಾ ಸಮಿತಿಯ ರಚನೆಗೆ ಅವಕಾಶ ಕಲ್ಪಿಸುತ್ತದೆ. ಮೇಲ್ಕಂಡ ಪ್ರಾಧಿಕಾರಗಳು ಮತ್ತು ಸಮಿತಿಗಳು ಸರ್ಕಾರಿ ಅಧಿಕಾರಿಗಳನ್ನು ಒಳಗೊಂಡಿರತಕ್ಕದ್ದು. ಸಭೆಗಳು ಮೊದಲಾದವುಗಳಿಗೆ ತಗಲುವ ವೆಚ್ಚವನ್ನು ನಿರ್ಲಕ್ಷಿಸಲಾಗಿದೆ ಮತ್ತು ಅವುಗಳನ್ನು ಅಂದಾಜು ಮಾಡಲು ಸಾಧ್ಯವಿಲ್ಲ. ಆವರ್ತಕ ಅನಾವರ್ತಕ ಇವೆರಡರಲ್ಲೂ ಇತರ ಯಾವುದೇ ಹೆಚ್ಚುವರಿ ವೆಚ್ಚವಿರತಕ್ಕದ್ದಲ್ಲ.

**ಪ್ರತ್ಯಾಯೋಜಿತ ಶಾಸನ ರಚನೆಗೆ ಸಂಬಂಧಿಸಿದ ಜ್ಞಾಪನ**

ವಿಧೇಯಕದ 15ನೇ ಖಂಡವು, ರಾಜಪತ್ರದಲ್ಲಿ ಅಧಿಸೂಚನೆ ಹೊರಡಿಸುವ ಮೂಲಕ ಕೇಂದ್ರ ಸರ್ಕಾರಕ್ಕೆ ಪ್ರಸ್ತಾವಿತ ಶಾಸನದ ಉಪಬಂಧಗಳ ನಿರ್ವಹಣಾ ನಿಯಮಗಳನ್ನು ರೂಪಿಸುವ ಅಧಿಕಾರ ನೀಡಿದೆ. ಆ ಖಂಡದ (2)ನೇ ಉಪಖಂಡವು, ಸದರಿ ಖಂಡದ ಮೇರೆಗೆ ರೂಪಿಸಬಹುದಾದ ನಿಯಮಗಳಿಗೆ ಸಂಬಂಧಿಸಿದ ವಿಷಯಗಳನ್ನು ಪರಿಗಣಿಸುತ್ತದೆ. ಇತರ ವಿಷಯಗಳ ಜೊತೆಗೆ ಈ ವಿಷಯಗಳು, 4ನೇ ಪ್ರಕರಣದ (1)ನೇ ಉಪಪ್ರಕರಣದ ಮೇರೆಗೆ ಚಲಾಯಿಸಬಹುದಾದ ಅರಣ್ಯ ಹಕ್ಕುಗಳ ರೀತಿ, 4ನೇ ಪ್ರಕರಣದ (4)ನೇ ಉಪಪ್ರಕರಣದ ಮೇರೆಗೆ ಅರಣ್ಯ ಹಕ್ಕುಗಳ ಮಾನ್ಯತೆ ಮತ್ತು ಪರಿಶೀಲನೆಯ ಪ್ರಕ್ರಿಯೆ ಮತ್ತು ರೀತಿ, ಕ್ಲೇಮುಗಳನ್ನು ಸ್ವೀಕರಿಸುವ ಪ್ರಕ್ರಿಯೆ ಅವುಗಳನ್ನು ಕ್ರೋಢೀಕರಿಸುವುದು ಮತ್ತು ಪರಿಶೀಲಿಸುವುದು ಮತ್ತು 6ನೇ ಪ್ರಕರಣದ (1)ನೇ ಉಪಪ್ರಕರಣದ ಮೇರೆಗೆ ಅರಣ್ಯ ಹಕ್ಕುಗಳ ಚಲಾವಣೆಗಾಗಿ ಶಿಫಾರಸು ಮಾಡಲಾದ ಪ್ರತಿಯೊಂದು ಕ್ಲೇಮಿನ ಪ್ರದೇಶವನ್ನು ಚಿತ್ರಿಸುವ ಭೂಪಟವನ್ನು ಸಿದ್ಧಪಡಿಸುವುದು ಮತ್ತು 6ನೇ ಪ್ರಕರಣದ (2)ನೇ ಉಪಪ್ರಕರಣದ ಅಡಿ ಉಪವಿಭಾಗೀಯ ಮಟ್ಟದ ಸಮಿತಿಗೆ ಅರ್ಜಿಯನ್ನು ಸಲ್ಲಿಸುವ ರೀತಿ, 6ನೇ ಪ್ರಕರಣದ(8)ನೇ ಉಪಪ್ರಕರಣದ ಮೇರೆಗೆ ಉಪ-ವಿಭಾಗ ಮಟ್ಟದ ಸಮಿತಿ, ಜಿಲ್ಲಾಮಟ್ಟದ ಸಮಿತಿ ಮತ್ತು ರಾಜ್ಯಮಟ್ಟದ ಮೇಲ್ವಿಚಾರಣಾ ಸಮಿತಿಯ ಸದಸ್ಯರಾಗಿ ನೇಮಕ ಮಾಡಬೇಕಿರುವ ರಾಜ್ಯ ಸರ್ಕಾರದ ಕಂದಾಯ, ಅರಣ್ಯ ಮತ್ತು ಬುಡಕಟ್ಟು ವ್ಯವಹಾರಗಳ ಇಲಾಖೆಗಳ ಅಧಿಕಾರಿಗಳ ಶ್ರೇಣಿ ಮತ್ತು ಉಪ-ವಿಭಾಗ ಮಟ್ಟದ ಸಮಿತಿ, ಜಿಲ್ಲಾಮಟ್ಟದ ಸಮಿತಿ ಮತ್ತು ರಾಜ್ಯಮಟ್ಟದ ಮೇಲ್ವಿಚಾರಣಾ ಸಮಿತಿಯ ಸ್ವರೂಪ ಮತ್ತು ಪ್ರಕಾರ್ಯಗಳು ಮತ್ತು 6ನೇ ಪ್ರಕರಣದ (9)ನೇ ಉಪಪ್ರಕರಣದ ಮೇರೆಗೆ ಅವುಗಳ ಪ್ರಕಾರ್ಯಗಳ ನಿರ್ವಹಣೆಯಲ್ಲಿ ಪಾಲಿಸಬೇಕಿರುವ ಪ್ರಕ್ರಿಯೆಗೆ ಸಂಬಂಧಪಟ್ಟಿದೆ. 15ನೇ ಖಂಡದ (3)ನೇ ಉಪಖಂಡವು, ಸಂಸತ್ತಿನಲ್ಲಿ ಮಂಡಿಸಲು ಅಗತ್ಯಪಡಿಸಿರುವ ನಿಯಮಗಳನ್ನು ಉಪಬಂಧಿಸಿದೆ.

2. ಮೇಲೆ ಹೇಳಲಾದ ವಿಷಯಗಳು ಪ್ರಕ್ರಿಯೆ ಮತ್ತು ಆಡಳಿತ ವಿವರಗಳ ವಿಷಯಗಳಿಗೆ ಸಂಬಂಧಪಟ್ಟವುಗಳಾಗಿದ್ದು, ವಿಧೇಯಕದಲ್ಲಿ ಅವುಗಳಿಗೆ ಅವಕಾಶ ಕಲ್ಪಿಸುವುದು ಸಾಧ್ಯವಿಲ್ಲ. ಹೀಗಾಗಿ ಶಾಸನ ರಚನಾಧಿಕಾರ ಪ್ರತ್ಯಾಯೋಜನೆಯು ಒಂದು ಸಾಮಾನ್ಯ ಗುಣಲಕ್ಷಣ.

**ಲೋಕಸಭೆ**

ತಲೆಮಾರುಗಳಿಂದ ಅಂಥ ಅರಣ್ಯಗಳಲ್ಲಿ ವಾಸಿಸುತ್ತಿರುವ ಆದರೆ ಅವರ ಹಕ್ಕುಗಳನ್ನು
ದಾಖಲಿಸಲಾಗದ ಅರಣ್ಯವಾಸಿ ಅನುಸೂಚಿತ ಬುಡಕಟ್ಟು ಅರಣ್ಯ ಜಮೀನಿನಲ್ಲಿನ ಅರಣ್ಯ
ಹಕ್ಕುಗಳ ಅಧಿಭೋಗವನ್ನು ಮಾನ್ಯ ಮಾಡಲು ಮತ್ತು ನಿಹಿತಗೊಳಿಸಲು ಮತ್ತು ಹಾಗೆ
ನಿಹಿತಗೊಳಿಸಲಾದ ಅರಣ್ಯ ಹಕ್ಕುಗಳನ್ನು ಮತ್ತು ಅರಣ್ಯ ಜಮೀನಿಗೆ ಸಂಬಂಧಿಸಿದ
ಅಂಥ ಮಾನ್ಯತೆ ಮತ್ತು ನಿಹಿತಗೊಳಿಸುವಿಕೆ ಅಗತ್ಯವಾದ ಸಾಕ್ಷ್ಯ ಸ್ವರೂಪಗಳನ್ನು
ದಾಖಲಿಸುವುದಕ್ಕಾಗಿ ಒಂದು ಚೌಕಟ್ಟಿಗೆ ಅವಕಾಶ ಕಲ್ಪಿಸುವ
ಒಂದು ವಿಧೇಯಕ.

**(ಶ್ರೀ ಪಿ.ಆರ್. ಕಿಂಡಿಯಾ, ಬುಡಕಟ್ಟು ವ್ಯವಹಾರಗಳ ಸಚಿವರು)**

# THE SCHEDULED TRIBES (RECOGNITION OF FOREST RIGHTS) BILL, 2005

## A BILL

to recognise and vest the forest rights and occupation in forest land in forest dwelling Scheduled Tribes who have been residing in such forests for generations but whose rights could not be recorded and to provide for a framework for recording the forest rights so vested and the nature of evidence required for such recognaition and vesting in respect of forest land.

Whereas the recognised rights of the forest dwelling Scheduled Tribes include the responsibilities and authority for sustainable use, conservation of biodiversity and maintenance of ecological balance and there by strengthening the conservation regime of the forests while ensuring livelihood and food security of the forest dwelling Scheduled Tribes;

And whereas the forest rights on ancestral lands and their habitat were not adequately recognised in the consolidation of State forests during the colonial period as well as in independent India resulting in historical injustice to the forest dwelling Scheduled Tribes who are integral to the very survival and sustainability of the forest ecosystems ;

And whereas it has become necessary to address the long standing insecurity of tenurial and access rights of forest dwelling Scheduled Tribes including those who were forced to relocate their dwelling due to State development interventions.

Be it enacted Parliament in the Fifty-sixth Year of the Republic of India as follows :-

## CHAPTER - I

### PRELIMINARY

**1. Short title, extent and commencement.-** (1) This Act may be called the Scheduled Tribes (Recognition of Forest Rights) Act, 2005.

(2) It extends to the whole of India except the State of Jammu and Kashmir.

(3) It shall come into force on such date as the Central Government may, by notification in the Official Gazette, appoint.

**2. Definitions.-** In this Act, unless the context otherwise requires,-

(a) "competent authority" means any officer or authority appointed by the Central Government, by notification, to deal with disputes referred to in sub-section (7) of section 4;

(b) "core areas" means such areas of National Parks and Sanctuaries required to be kept as inviolate for the purposes of wildlife conservation as may be determined, by notification, by the Ministry of the Central Government dealing with Environment and Forests;

(c) "forest dwelling Scheduled Tribes" means the members or community of the Scheduled Tribes who primarily reside in forests and includes the Scheduled Tribes pastoralist communities and who depend on the forests or forest lands for bona fide livelihood needs;

(d) "forest land" means land of any description falling within any forest area and includes unclassified forests, un-demarcated forests existing or deemed forests, protected forests, reserved forests, Sanctuaries and National Parks;

(e) "forest rights" means the forest rights referred to in section 3;

(f) " forest villages" means the settlements which have been established inside the forests by the forest department of any State Government for forestry operations or which were coverted into forest villages through the forest reservation process and includes forest settlement villages, fixed demand holdings, all types of taungya settlements, by whatever name called, for such villages and includes lands for cultivation and other uses permitted by the Government;

(g) "Gram Sabha" means a village assembly which shall consist of all adult members of a village and in case of States having no Panchayats, the traditional village institutions;

(h) " habitat" includes the area comprising the customary habitat and such other habitat in reserved forests and protected forests of primitive tribal groups and pre-agricultural communities and other forest dwelling Scheduled Tribes;

(i) "minor forest produce" includes all non-timber forest produce of plant origin including bamboo, brush wood, stumps, cane, tussar, cocoons, honey, wax, lac, tendu or kendu leaves, medicinal plants and herbs, roots, tubers and the like;

